

ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಕನ್ನಡ ಭಾಷಾಪ್ರಭೇದಗಳು

ಡಾ. ಸಂಗಮೇಶ ಸವದತ್ತಿಮಠ

# ಕನ್ನಡ ಭಾಷಾಪ್ರಭೇದಗಳು

ಡಾ. ಸಂಗಮೇಶ ಸವದತ್ತಿಮಠ



ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

**KANNADA BASHAPRABHEDAGALU** - By Dr. Sangamesha Savadattimata, Published by The Director, Prasaranga, Kannada University, Hampi, Vidyaranya, Kamalapura - 583 221.
First Impression: 1998, Pp: iv +28, Rs. 5-00.



ಮಂಟಪಮಾಲೆ ೪೨

**ಪ್ರಕಾಶಕರು**
ಪ್ರೊ. ಎ. ವಿ. ನಾವಡ
ನಿರ್ದೇಶಕರು, ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ, ಕಮಲಾಪುರ ೫೮೩ ೨೨೧

ಬೆಲೆ ರೂ. ೫

ಮುಖಪುಟ ಕೆ. ಕೆ. ಮಕಾಳಿ

**ಮುದ್ರಣ**
ಇಂಪ್ರೆಸ್, ಹೊಸಪೇಟೆ

*

# ದೇಸಿಯೊಳ್ ಪುಗುವುದು

ಡಾ. ಎಂ. ಎಂ. ಕಲಬುರ್ಗಿ
ಕುಲಪತಿಗಳು

ಕನ್ನಡ ವಿಶ್ವವಿದ್ಯಾಲಯದ ಪ್ರಥಮ ಗುರಿ 'ಕನ್ನಡ ಸಂಸ್ಕೃತಿ'ಯ ಶೋಧ, ವಿಮರ್ಶೆ ಮತ್ತು ಪ್ರಸಾರ. ಅಂತಿಮ ಗುರಿ ಸುತ್ತಲಿನ ಸಂಸ್ಕೃತಿಗಳ ವಿವೇಕಪೂರ್ಣ ವಿನಿಯೋಗ. ಆದಿಕವಿ ಪಂಪ, ಸಾಹಿತ್ಯಕ್ಕೆ ಅನ್ವಯಿಸಿ ಹೇಳಿರುವ 'ದೇಸಿಯೊಳ್ ಪುಗುವುದು, ಪೊಕ್ಕು ಮಾರ್ಗದೊಳೆ ತಳ್ವುದು' ಎಂಬ ಮಾತು ಪರ್ಯಾಯವಾಗಿ ಇದನ್ನೇ ಧ್ವನಿಸುತ್ತದೆ.

ಮೂಲತಃ ಸಮಾಜವೊಂದು ಸ್ವ-ರೂಪ, ಸ್ವ-ಭಾವ ವಿಶಿಷ್ಟವಾಗಿರುತ್ತದೆ. ಹೀಗಿದ್ದೂ ಅದು ತನ್ನಷ್ಟಕ್ಕೆ ತಾನು ಪ್ರತ್ಯೇಕವಾಗಿ ನಿಲ್ಲದೆ, ಅನ್ಯಸಂಸ್ಕೃತಿಗಳನ್ನು ಸ್ವೀಕರಿಸುತ್ತ, ನಿರಾಕರಿಸುತ್ತ ಒಮ್ಮೊಮ್ಮೆ ತಿರಸ್ಕರಿಸುತ್ತ ಮುಂದುವರಿಯುತ್ತದೆ. ಪ್ರಧಾನವಾಗಿ ಆರ್ಯ-ಆಂಗ್ಲ ಸಂಸ್ಕೃತಿಗಳನ್ನು ಜೀರ್ಣಿಸಿಕೊಳ್ಳುತ್ತ ಬಂದ ಕನ್ನಡ ಸಮಾಜ, ಉದ್ದಕ್ಕೂ ದ್ವಿಭಾಷಾ ಸಂದರ್ಭದಲ್ಲಿ ಬದುಕುಮಾಡಿದೆ. ಹಿಂದಿನದು ಕನ್ನಡ-ಸಂಸ್ಕೃತ ದ್ವಿಭಾಷಾ ಸಂದರ್ಭ, ಇಂದಿನದು ಕನ್ನಡ-ಇಂಗ್ಲಿಷ್ ದ್ವಿಭಾಷಾ ಸಂದರ್ಭ. ಗ್ರಂಥಸ್ಥ ಭಾಷೆಯಾದ ಸಂಸ್ಕೃತಕ್ಕಿಂತ ಜೀವಂತ ಭಾಷೆಯಾದ ಇಂಗ್ಲಿಷ್ ಬೆಳಕಾಗುತ್ತಲೇ ಬೆಂಕಿಯಾಗಬಹುದೇ? ಎಂಬ ಭಯವನ್ನು ನಮ್ಮಲ್ಲಿ ಹುಟ್ಟಿಸಿದೆ. ಹೆಚ್ಚಿನದಾಗಿ ಆಂಗ್ಲ ಜೀವನಶೈಲಿ ನಮ್ಮ ಜೀವನಾಡಿಗಳನ್ನು ದಿನೇದಿನೇ ನಿಯಂತ್ರಿಸತೊಡಗಿ, ಒಂದು ಬಗೆಯ ಅತಿರೇಕ ಸೃಷ್ಟಿಯಾಗುತ್ತಲಿದೆ.

ಗಾಂಧೀಜಿಯವರು ಈ ಅತಿರೇಕವನ್ನು ಬಹಳ ಹಿಂದೆಯೇ ಊಹಿಸಿ, 'ಸ್ವದೇಶೀ ಚಳುವಳಿ'ಯನ್ನು ಕೈಗೆತ್ತಿಕೊಂಡಿದ್ದರು. ಈ ಮತ್ತು ಇಂಥ ದೇಶೀ ಚಿಂತನೆಗಳ ಆದರ್ಶದಲ್ಲಿ ಕನ್ನಡ ವಿಶ್ವವಿದ್ಯಾಲಯ ಮೊದಲು ಮಾಡಬೇಕಾದ ಕೆಲಸವೆಂದರೆ, ವಿಸ್ಮೃತಿಯ ಸಾಗರದಲ್ಲಿ ಮುಳುಗಿಹೋಗಿರುವ ನಮ್ಮ ಪಾರಂಪರಿಕ ಕ್ರಿಯೆ, ಪ್ರಕ್ರಿಯೆ ರೂಪದ 'ಸ್ವದೇಶೀ ಸತ್ಯ'ಗಳನ್ನು ಶೋಧಿಸುವುದು; ಬಳಿಕ ಅಲ್ಲಿ ಸೇರಿಕೊಂಡಿರುವ ದೋಷಗಳನ್ನು ದೂರ ಸರಿಸಿ ಗುಣಾಂಶಗಳನ್ನು ಗುರುತಿಸುವುದು; ಜೊತೆಗೆ ಪೂರ್ಣ ಬದುಕಿಗೆ ಅವಶ್ಯವಿರುವ ಕೊರತೆಗಳನ್ನು ಅನ್ಯಸಂಸ್ಕೃತಿಯಿಂದ ಎಚ್ಚರ ವಹಿಸಿ ತುಂಬಿಕೊಳ್ಳುವುದು. ಒಟ್ಟಾರೆ ಅನ್ಯಸಂಸ್ಕೃತಿಗಳ ಸಹಯೋಗದಲ್ಲಿಯೂ 'ಕನ್ನಡವು

ಕನ್ನಡವ ಕನ್ನಡಿಸುತಿರಬೇಕು' ಎಂಬಂತೆ ನಾವು ಕನ್ನಡವನ್ನು ಬದುಕಿಸಬೇಕಾಗಿದೆ, ಬೆಳೆಸಬೇಕಾಗಿದೆ. ಹಾಗೆ ಮಾಡಿದಾಗ ಮಾತ್ರ ಕನ್ನಡತ್ವವನ್ನು ನಾಶ ಮಾಡಿಕೊಂಡು ಜಾಗತಿಕವಾಗುವುದು ತಪ್ಪಿ, ಕನ್ನಡವೂ ಜಾಗತಿಕವಾಗುತ್ತದೆ. ಜಾಗತಿಕವಾಗುವುದೆಂದರೆ ಸ್ಥಾನಿಕದ ನಿರಾಕರಣೆಯಲ್ಲವೆಂಬ ಸತ್ಯ ಸ್ಥಾಪನೆಗೊಳ್ಳುತ್ತದೆ.

ಹೆಗಲ ಮೇಲೆ ಈ ಹೊಣೆಯನ್ನು ಹೊತ್ತು, ಅಸ್ತಿತ್ವಕ್ಕೆ ಬಂದಿರುವ ಕನ್ನಡ ವಿಶ್ವವಿದ್ಯಾಲಯ ಪೂರೈಸಬೇಕಾದ ಇನ್ನೊಂದು ಕೆಲಸವೆಂದರೆ 'ಎಲ್ಲ ರಸ್ತೆಗಳು ರೋಮ್‌ದ ಕಡೆಗೆ ಎಂಬಂತೆ' ಕನ್ನಡದ ಎಲ್ಲ ಹಾದಿಗಳು ಹಂಪಿಯ ಕಡೆಗೆ ಕೇಂದ್ರೀಕರಣಗೊಳ್ಳುವ ಮತ್ತು ಇಲ್ಲಿಂದಲೇ ಜಗತ್ತಿನ ಅಂಚಿನತ್ತ ವಿಕೇಂದ್ರೀಕರಣಗೊಳ್ಳುವ ವಾತಾವರಣವನ್ನು ನಿರ್ಮಾಣಮಾಡುವುದು. ಈ ರೀತಿ ಐತಿಹಾಸಿಕ ಪರಂಪರೆ ಮತ್ತು ಭೌಗೋಳಿಕ ಪರಿಸರಗಳಲ್ಲಿ ಶ್ರಮಿಸಬೇಕಾಗಿರುವ ಕನ್ನಡ ವಿಶ್ವವಿದ್ಯಾಲಯ 'ಎಲ್ಲಾದರೂ ಇರು, ಎಂತಾದರೂ ಇರು, ಎಂದೆಂದಿಗೂ ನೀ ಕನ್ನಡವಾಗಿರು' ಎಂಬ ಪ್ರಜ್ಞೆ ಕನ್ನಡಿಗರಲ್ಲಿ ಜಾಗೃತವಾಗಿರುವಂತೆಯೂ ನೋಡಿಕೊಳ್ಳಬೇಕಾಗಿದೆ.

ಈ ನೆಲೆಗಳಲ್ಲಿ ಸೃಷ್ಟಿಯಾಗುವ ತನ್ನ ಶೋಧನೆಗಳನ್ನು, ಚಿಂತನೆಗಳನ್ನು ದಾಖಲಿಸಬೇಕೆನ್ನುವ ಮತ್ತು ಸಂವಹನಗೊಳಿಸಬೇಕೆನ್ನುವ ಕನ್ನಡ ವಿಶ್ವವಿದ್ಯಾಲಯ, ಯೋಗ್ಯ ಪ್ರಸಾರಮಾಧ್ಯಮಗಳನ್ನು ಅವಲಂಬಿಸಬೇಕಾಗುತ್ತದೆ. ಈ ಮೇರೆಗೆ ಈ ಸಂಸ್ಥೆಯ ಪ್ರಸಾರಾಂಗ ಶ್ರವ್ಯ, ದೃಶ್ಯ, ವಾಚನ ಸಾಮಗ್ರಿಯ ಉತ್ಪಾದನೆ-ವಿತರಣೆ ಇತ್ಯಾದಿ ಕಾರ್ಯಗಳನ್ನು ಕೈಗೆತ್ತಿಕೊಂಡಿದೆ. ಇವುಗಳಲ್ಲಿ ವಾಚನ ಸಾಮಗ್ರಿಯಾಗಿರುವ ಪುಸ್ತಕಗಳಿಗೆ ಹೆಚ್ಚಿನ ಮಹತ್ವವಿದೆ. ಆಂತರಿಕ ಸತ್ವ, ಬಾಹ್ಯ ಸೌಂದರ್ಯಗಳಿಂದ ಕೂಡಿರುವ ವಿಶಿಷ್ಟ 'ಪುಸ್ತಕಸಂಸ್ಕೃತಿ' ಯನ್ನು ಅಸ್ತಿತ್ವಕ್ಕೆ ತರುತ್ತಲಿರುವ ಪ್ರಸಾರಾಂಗದ ಇತ್ತೀಚಿನ ಕೃತಿಯಾಗಿದೆ 'ಕನ್ನಡ ಭಾಷಾಪ್ರಭೇದಗಳು'.

ಡಾ. ಸಂಗಮೇಶ ಸವದತ್ತಿಮಠ ಅವರು "ಕನ್ನಡ ಭಾಷಾಪ್ರಭೇದಗಳ" ಬಗ್ಗೆ ತಲಸ್ಪರ್ಶಿ ಅಧ್ಯಯನ ಮಾಡಿದವರು. ಅವರ ಚಿಂತನೆಗಳು ಈ ಕಿರುಪುಸ್ತಕದಲ್ಲಿ ಹರಳುಗೊಂಡಿವೆ. ಇದಕ್ಕಾಗಿ ಅವರಿಗೆ ಕನ್ನಡ ವಿಶ್ವವಿದ್ಯಾಲಯದ ಕೃತಜ್ಞತೆಗಳು ಸಲ್ಲುತ್ತವೆ.

# ಕನ್ನಡ ಭಾಷಾ ಪ್ರಭೇದಗಳು

## ೧. ಕನ್ನಡ ಭಾಷೆಯ ಪ್ರಾಚೀನತೆ

ಕನ್ನಡವು ದ್ರಾವಿಡ ಭಾಷಾವರ್ಗದ ಒಂದು ಅತ್ಯಂತ ಪ್ರಮುಖ ಭಾಷೆ. ಕ್ರಿ.ಪೂ.ಸು. ೨೫೦೦ ವರ್ಷಗಳ ಹಿಂದೆ ಬಳಕೆಯಲ್ಲಿರಬಹುದಾದ ಮೂಲ ದ್ರಾವಿಡ ಭಾಷೆಯಿಂದ ಕಾಲಾನುಕ್ರಮದಲ್ಲಿ ಬೇರೆ ಬೇರೆ ಭಾಷೆಗಳು ಹುಟ್ಟಿಕೊಂಡವು. ಅವುಗಳನ್ನು ಉತ್ತರ ದ್ರಾವಿಡ, ಮಧ್ಯ ದ್ರಾವಿಡ, ದಕ್ಷಿಣ ದ್ರಾವಿಡ, ದಕ್ಷಿಣ ಮಧ್ಯ ದ್ರಾವಿಡ ಎಂದು ಮುಖ್ಯವಾಗಿ ನಾಲ್ಕು ಗುಂಪುಗಳಾಗಿ ವರ್ಗೀಕರಿಸುತ್ತಾರೆ. ಕನ್ನಡವು ದಕ್ಷಿಣ ದ್ರಾವಿಡ ಭಾಷಾ ಗುಂಪಿನ ಮಹತ್ವದ ಭಾಷೆ. ಭಾರತದಲ್ಲಿ ಪ್ರಾಚೀನತೆಯ ದೃಷ್ಟಿಯಿಂದ ಆರ್ಯ ಭಾಷಾವರ್ಗದ ಸಂಸ್ಕೃತಕ್ಕೆ ಪ್ರಥಮ ಸ್ಥಾನವಿದೆ. ಎರಡನೆಯ ಸ್ಥಾನ ದ್ರಾವಿಡ ಭಾಷಾವರ್ಗದ ತಮಿಳಿಗೆ ದೊರೆಯುತ್ತದೆ. ಮೂರನೆಯ ಸ್ಥಾನ ಕನ್ನಡ ಭಾಷೆಗೆ ಇದೆ. ಮೂಲ ದಕ್ಷಿಣ ದ್ರಾವಿಡ ಭಾಷಾ ಶಾಖೆಯಿಂದ ಕನ್ನಡ ಭಾಷೆ ಕ್ರಿ.ಶ. ಪೂರ್ವ ಸುಮಾರು ೫ ರಿಂದ ೪ನೇ ಶತಮಾನದ ವೇಳೆಗೆ ಸ್ವತಂತ್ರವಾಯಿತೆಂದು ದ್ರಾವಿಡ ಭಾಷಾ ವಿಜ್ಞಾನಿಗಳ ಅಭಿಪ್ರಾಯ. ಆನಂತರ ಮಹಾಭಾರತದ ಭೀಷ್ಮ ಪರ್ವ; ಸಂಸ್ಕೃತದ ಮೃಚ್ಛಕಟಿಕ ನಾಟಕ, ಮಾರ್ಕಂಡೇಯ ಪುರಾಣ, ಪದ್ಮ ಪುರಾಣ, ತಮಿಳಿನ ಶಿಲಪ್ಪದಿಗಾರಂ ಇತ್ಯಾದಿಗಳಲ್ಲಿರುವ ಕನ್ನಡ, ಕರ್ನಾಟಕದ ಉಲ್ಲೇಖಗಳಿಂದ ಕನ್ನಡವು ಕ್ರಿ.ಶ. ಪೂರ್ವದ ಕಾಲದಲ್ಲಿಯೇ ಪ್ರಸಿದ್ಧಿ ಪಡೆದಿತ್ತೆಂದು ತಿಳಿದುಬರುತ್ತದೆ. ಗ್ರೀಕ್ ಭಾಷೆಯಲ್ಲಿರುವ ಕ್ರಿ.ಶ. ಎರಡನೆಯ ಶತಮಾನದ ಆಕ್ಸಿರಿಂಕೆಸ್ ಪೇಪಿರಸನ ಗ್ರೀಕ್ ಪ್ರಹಸನದಲ್ಲಿರುವ ಕನ್ನಡ ಪದಗಳು ಆ ವೇಳೆಗೆ ಕನ್ನಡದ ಅಸ್ತಿತ್ವವನ್ನು ಖಚಿತಪಡಿಸುತ್ತವೆಂದು ವಿದ್ವಾಂಸರ ಅಭಿಪ್ರಾಯ. ಒಟ್ಟಿನಲ್ಲಿ ಕ್ರಿ.ಶ. ಪೂ. ೪-೩ನೇ ಶತಮಾನದ ವೇಳೆಗೆ ಕನ್ನಡ ಭಾಷೆ ತನ್ನ ಸ್ವತಂತ್ರ ಅಸ್ತಿತ್ವವನ್ನು ಹೊಂದಿತ್ತು. ಕ್ರಿ.ಶ. ಆರಂಭದ ವೇಳೆಗೆ ಅದು ತನ್ನ ವ್ಯಾಪ್ತಿಯನ್ನು ವಿಸ್ತರಿಸಿತು. ಕ್ರಿ.ಶ. ೪-೫ ನೆಯ ಶತಮಾನದ ವೇಳೆಗೆ ಸ್ವತಂತ್ರ ಲಿಪಿಯನ್ನೂ ರೂಢಿಸಿಕೊಂಡು ಭಾಷೆಯನ್ನು ಬರಹ ರೂಪದಲ್ಲಿ ಳಿಸತೊಡಗಿತ್ತು ಎಂಬ ಊಹೆ ಉಂಟು. ಕ್ರಿ.ಶ. ೪೫೦ ರ ಕನ್ನಡದ ಉಪಲಬ್ಧ ಮೊಟ್ಟ ಮೊದಲ ಹಲ್ಮಿಡಿ ಶಾಸನದಲ್ಲಿನ ಭಾಷೆ ಸಂಸ್ಕೃತ ಭೂಯಿಷ್ಠವಾಗಿರುವುದು ಸ್ಪಷ್ಟವಾಗುತ್ತದೆ. ಮೂಲ ದಕ್ಷಿಣ ದ್ರಾವಿಡ ಭಾಷೆಯಿಂದ ಸ್ವತಂತ್ರವಾಗಿ ಮೂಡಿ ಬಂದಿದ್ದರೂ ಕನ್ನಡವು ಸಂಸ್ಕೃತ ಭಾಷೆಯ ತೊಟ್ಟಿಲಲ್ಲೇ ಬೆಳೆಯತೊಡಗಿರುವಂತೆ ತೋರುತ್ತದೆ.

ಕನ್ನಡ ಭಾಷೆಗೆ ಸಾಕಷ್ಟು ಪ್ರಾಚೀನ ಇತಿಹಾಸ ಇದೆ. ಕನ್ನಡ ಭಾಷೆ ಕ್ರಿ.ಶ. ಆರಂಭದ ವೇಳೆಗೆ ಸ್ವತಂತ್ರವಾಗಿತ್ತೆಂಬುದರಲ್ಲಿ ಎರಡು ಮಾತಿಲ್ಲ. ಮೊಟ್ಟ ಮೊದಲ ಶಾಸನ ಹಲ್ಮಿಡಿ ಶಾಸನ ದೊರೆತ ಮೇಲೆ ಅನೇಕ ಶಿಲಾಶಾಸನಗಳು ದೊರೆತಿವೆ. ಆ ಶಾಸನಗಳಲ್ಲಿ ಕನ್ನಡ ಭಾಷೆ ಪ್ರೌಢತೆಯಿಂದ ಸರಳತೆಯೆಡೆಗೆ, ದೇಸಿಯೆಡೆಗೆ ಸಾಗಿದಂತೆ ತೋರುತ್ತದೆ. ಕನ್ನಡದಲ್ಲಿ ಸಿಕ್ಕಿರುವ ಮೊಟ್ಟಮೊದಲ ಗ್ರಂಥವೆಂದರೆ ಕ್ರಿ.ಶ. ೮೫೦ರ ವೇಳೆಗೆ ಈಗಿನ ಕಲಬುರ್ಗಿ ಜಿಲ್ಲೆಯ ಮಳಖೇಡದಲ್ಲಿ ರಾಜ್ಯವಾಳುತ್ತಿದ್ದ ಚಕ್ರವರ್ತಿ ನೃಪತುಂಗನ ಆಸ್ಥಾನಕವಿ ಶ್ರೀವಿಜಯನು ಬರೆದ ಕವಿರಾಜಮಾರ್ಗ. ಶ್ರೀವಿಜಯನು ಕನ್ನಡ ಭಾಷೆಯನ್ನು ಮಾತನಾಡುವ ಜನರ ಸ್ವಭಾವ, ಅವರ ವೈಶಿಷ್ಟ್ಯ, ಕನ್ನಡ ನಾಡಿನ ವಿಸ್ತಾರ, ಕನ್ನಡ ಭಾಷೆಯಲ್ಲಿರುವ ಪ್ರಭೇದಗಳು ಇವೇ ಮುಂತಾದ ಹಲವಾರು ವಿಷಯಗಳನ್ನು ಇಲ್ಲಿ ಹೇಳಿರುವುದರಿಂದ ಒಂಬತ್ತನೆಯ ಶತಮಾನದಲ್ಲಿ ಕನ್ನಡ ಸಾಕಷ್ಟು ಪ್ರಬುದ್ಧ ಭಾಷೆಯಾಗಿ ಹೊಮ್ಮಿತ್ತೆಂದು ಸ್ಪಷ್ಟವಾಗುತ್ತದೆ. ಮುಂದಿನ ಸುಮಾರು ಒಂದುನೂರು ವರ್ಷಗಳ ಅವಧಿಯಲ್ಲಿ ಕನ್ನಡ ಭಾಷೆ ಇನ್ನಷ್ಟು ಪ್ರೌಢವಾಗುತ್ತಾ ನಡೆಯಿತು. ಕನ್ನಡದಲ್ಲಿ ಸಾಹಿತ್ಯ ರಚನೆಯೂ ತೀವ್ರವಾಗುತ್ತ ಸಾಗಿತು. ಚಂಪೂ ಎಂಬ ಹೆಸರಿನ ಗದ್ಯ-ಪದ್ಯ ಮಿಶ್ರಿತ ಸಾಹಿತ್ಯ ರೂಪದಲ್ಲಿ ಪಂಪ-ಪೊನ್ನ-ರನ್ನ

ರಂಬ ಕವಿಗಳು ಕಾವ್ಯರಚನೆ ಮಾಡಿ ಕಾವ್ಯ ಕ್ಷೇತ್ರಕ್ಕೆ ಗರಿಮೂಡಿಸಿದರು. ೧೦ನೇ ಶತಮಾನದ ವೇಳೆಗೆ ಕನ್ನಡ ಸಾಹಿತ್ಯ ಸುವರ್ಣಯುಗವನ್ನು ಕಾಣುವಂತಾಯಿತು. ಕನ್ನಡ ಭಾಷೆಯಲ್ಲಿ ೧೨ನೇ ಶತಮಾನದ ಶಿವಶರಣರು ರಚಿಸಿದ ವಚನಸಾಹಿತ್ಯ ಜಗತ್ತಿನ ಯಾವುದೇ ಭಾಷೆಯಲ್ಲಿ ರಚಿತವಾಗಿರದಂತಹ ವಿಶಿಷ್ಟ ಸಾಹಿತ್ಯವೆನಿಸಿದೆ. ವಿಶ್ವಸಾಹಿತ್ಯಕ್ಕೆ ಕನ್ನಡದ ವಿಶಿಷ್ಟ ಕೊಡುಗೆ ಎನಿಸಿದೆ. ಕಾವ್ಯ ಅಲ್ಲದೇ ಶಾಸ್ತ್ರ, ಪುರಾಣ, ವಿಜ್ಞಾನ, ಕೃಷಿ ಮುಂತಾದ ಗಂಭೀರ ವಿಷಯಗಳನ್ನು ವಿವರಿಸುವ ಕೃತಿಗಳು ಕನ್ನಡ ಭಾಷೆಯಲ್ಲಿ ರಚನೆಗೊಂಡಿರುವುದರಿಂದ ಅದೊಂದು ಸಾರ್ವಕಾಲಿಕ ಸಮರ್ಥ ಭಾಷೆಯನಿಸಿದೆ. ಹನ್ನೆರಡನೆಯ ಶತಮಾನದ ಅನಂತರ ಹಳಗನ್ನಡ ಭಾಷೆ ಪ್ರೌಢತೆಯಿಂದ ಸರಳತೆಯೆಡೆಗೆ ತಿರುಗಿ ನಡುಗನ್ನಡ ಎನ್ನಿಸಿತ್ತು. ಹದಿನೈದನೇ ಶತಮಾನದ ಅನಂತರ ಅದು ಇನ್ನಷ್ಟು ಹೊಸ ದಿಕ್ಕಿನಡೆಗೆ ಸಾಗಿ ಹೊಸಗನ್ನಡ ಎಂದೆನಿಸಿಕೊಂಡಿತು. ಇಪ್ಪತ್ತನೆಯ ಶತಮಾನದ ಈಚೆಗೆ ಆಧುನಿಕ ಕನ್ನಡ ಎನಿಸಿಕೊಳ್ಳತೊಡಗಿದೆ. ಕವಿರಾಜಮಾರ್ಗದ ಪೂರ್ವಕಾಲದ ಕನ್ನಡ ಹಳಗನ್ನಡ, ಅನಂತರ ಮೇಲೆ ಹೇಳಿದ ಹಳಗನ್ನಡ, ನಡುಗನ್ನಡ, ಹೊಸಗನ್ನಡ, ಆಧುನಿಕ ಕನ್ನಡ ಹೀಗೆ ಕಾಲಕಾಲಕ್ಕೆ ಕನ್ನಡ ಭಾಷೆ ಹೊಸ ಹೊಸ ಅವಸ್ಥೆಗಳನ್ನು ಪಡೆಯುತ್ತ ಸಾಗಿ ಬಂದಿದೆ. ಕನ್ನಡ ಭಾಷೆಯು ಸತ್ವದ ದೃಷ್ಟಿಯಿಂದ ಆಧುನಿಕ ಕಾಲದವರೆಗೂ ಯಾವ ಹಿನ್ನಡೆಯನ್ನು ಪಡೆಯದೆ ಬೆಳವಣಿಗೆ ಹೊಂದಿದೆ. ಭಾರತೀಯ ಯಾವ ಭಾಷೆಯ ಸಾಹಿತ್ಯವೂ ಪಡೆಯದಷ್ಟು ಅಂದರೆ ಆರು ಜ್ಞಾನಪೀಠ (ಭಾರತೀಯ ಭಾಷೆಗಳಲ್ಲಿ ರಚಿತವಾದ ಅತ್ಯುನ್ನತ ಸಾಹಿತ್ಯ ಕೃತಿಗೆ ದೊರೆಯುವ) ಶ್ರೇಷ್ಠ ಪ್ರಶಸ್ತಿಗಳನ್ನು ಕನ್ನಡ ಭಾಷೆಯ ಸಾಹಿತ್ಯ ಕೃತಿಗಳು ಪಡೆದಿರುವುದೇ ಇದಕ್ಕೆ ಸ್ಪಷ್ಟ ನಿದರ್ಶನವಾಗಿದೆ. ಇದೆಲ್ಲ ಕನ್ನಡದ ಗ್ರಾಂಥಿಕ ಭಾಷೆಯನ್ನು ಕುರಿತಾಯಿತು.

ಆಡುವ ನುಡಿಯಲ್ಲಿಯೂ ಕನ್ನಡದ ಸತ್ವಕ್ಕೆ ಕೊರತೆ ಇಲ್ಲ. ಹಳಗನ್ನಡದ ಕಾಲದಿಂದಲೂ ಜನರ ನಾಲಗೆಯ ಮೇಲೆ ಹುಟ್ಟುತ್ತಿದ್ದ ಜಾನಪದ ಭಾಷೆ ಹಾಗೂ ಸಾಹಿತ್ಯ ಇಂದಿಗೂ ವೈವಿಧ್ಯ ವೈಶಿಷ್ಟ್ಯಪೂರ್ಣವಾಗಿ ಮುಂದುವರಿದಿದೆ. ಆಡುಮಾತಿನಲ್ಲಿ ಪ್ರಾದೇಶಿಕ ಸಾಮಾಜಿಕ ಭಿನ್ನತೆಗಳು ಮೊದಲಿನಿಂದಲೂ ಇದ್ದುವೆಂಬುವುದಕ್ಕೆ ಕವಿರಾಜ ಮಾರ್ಗಕಾರನೇ ಉಲ್ಲೇಖಿಸಿರುವುದು ಸಾಕ್ಷಿಯಾಗಿದೆ. ಕನ್ನಡ ಆಡುನುಡಿಯಲ್ಲಿಯೂ ಮೌಖಿಕ ಸಾಹಿತ್ಯ ಎಂಬುದು ಕವಿರಾಜಮಾರ್ಗದ ಕಾಲದಿಂದಲೇ ಇರುವುದನ್ನೂ ನಾವು ಗುರುತಿಸಬಹುದು. ಧವಳಹಾಡು, ಅಂಟಿಸುಂಟಿ, ಜೋಕುಮಾರನ ಹಾಡು, ಬೀರನ ಕತೆ ಮುಂತಾದ ಶಬ್ದಗಳು ಇಂಥ ಮೌಖಿಕ ಸಾಹಿತ್ಯಕ್ಕೆ ಸಂಬಂಧಿಸಿವೆ. ಮಾರ್ಗಶೈಲಿಯಲ್ಲಿ ಕಾವ್ಯ ರಚಿಸಿದ ಶ್ರೇಷ್ಠ ಕವಿಗಳೂ ಕೂಡ ಕನ್ನಡದ ಆಡುನುಡಿಯ ಸೊಗಡನ್ನು ಕಂಡಿದ್ದಾರೆ. ಆದಿಕವಿ ಎನ್ನಿಸಿದ ಮಹಾಕವಿ ಪಂಪನೂ ಕಾವ್ಯದಲ್ಲಿ ದೇಸಿಯನ್ನು ಬಳಸಿ ಸುಂದರವಾಗಿರಿಸಿರುವುದನ್ನು ಕಾಣಬಹುದು. ಮುಂದೆ ಅನೇಕ ಕವಿಗಳು ಈ ದೇಸಿ ಬಳಕೆಗೆ ಪ್ರಾಶಸ್ತ್ಯ ನೀಡಿರುವುದೂ ಉಂಟು. ಆಯಾ ಕವಿಗಳು ತಮ್ಮ-ತಮ್ಮ ಕಾಲದ ಕನ್ನಡ ಆಡುನುಡಿಗಳಲ್ಲಿ ಬಳಕೆಯಲ್ಲಿದ್ದ ನಾಣ್ಣುಡಿ, ಗಾದೆಮಾತು ಮುಂತಾದವುಗಳನ್ನು ಉಚಿತವಾಗಿ ಬಳಸಿ ತಮ್ಮ ಕಾವ್ಯಗಳಿಗೆ ಕನ್ನಡ ಭಾಷೆಯ ಸಹಜ ಸೊಬಗನ್ನು ತಂದುಕೊಟ್ಟಿರುತ್ತಾರೆ. ಕನ್ನಡ ಬಾಷೆ ಕಾಲಕಾಲಕ್ಕೆ ಬದಲಾವಣೆಗೆ ಒಳಪಡುತ್ತಾ ಇಂದಿನ ಆಧುನಿಕ ಸ್ವರೂಪವನ್ನು ಪಡೆದಿದೆ. ಬದಲಾವಣೆಯ ಘಟ್ಟಗಳನ್ನು ಅನುಲಕ್ಷಿಸಿ ನಾಲ್ಕು ಅವಸ್ಥೆಗಳಲ್ಲಿ ಕನ್ನಡ ಭಾಷೆಯನ್ನು ಗುರುತಿಸಲಾಗುತ್ತದೆ.

## ೨. ಕನ್ನಡ ಭಾಷೆಯ ಅವಸ್ಥೆಗಳು

ಕನ್ನಡದ ಮೊಟ್ಟ ಮೊದಲನೆಯ ಉಪಲಬ್ಧ ಶಾಸನ ಹಲ್ಮಿಡಿ ಶಾಸನವಾದರೆ ಮೊಟ್ಟ ಮೊದಲ ಉಪಲಬ್ಧ ಗ್ರಂಥ "ಕವಿರಾಜಮಾರ್ಗ". ಇದು ಮಾನ್ಯಖೇಟ (ಇಂದಿನ ಗುಲಬರ್ಗಾ ಜಿಲ್ಲೆಯ ಮಳಖೇಡ) ದಲ್ಲಿದ್ದ ರಾಷ್ಟ್ರಕೂಟ ಚಕ್ರವರ್ತಿ ನೃಪತುಂಗನ (೮೧೪-೮೮೦) ಆಸ್ಥಾನ ಕವಿ ಶ್ರೀವಿಜಯ ರಚಿಸಿದ್ದು, ಅದರಲ್ಲಿ

ಕಾವೇರಿಯಿಂದಮಾ ಗೋದಾವರಿ ವರಮಿರ್ದನಾಡದಾ ಕನ್ನಡದೊಳ್ ಎಂದು ಹೇಳಿರುವುದನ್ನು ಗಮನಿಸಿದರೆ ಕನ್ನಡ ಪ್ರದೇಶ ೯ನೇ ಶತಮಾನದ ವೇಳೆಗೆ ಕಾವೇರಿಯಿಂದ ಗೋದಾವರಿ ನದಿಯವರೆಗೆ ವಿಸ್ತಾರವಾಗಿ ಪಸರಿಸಿತ್ತು ಎಂದು ಸ್ಪಷ್ಟವಾಗಿ ತಿಳಿದುಬರುತ್ತದೆ. ಅನಂತರದ ಒಂದು ಶತಮಾನದ ಅವಧಿಯಲ್ಲಿ ಕನ್ನಡದಲ್ಲಿ ಸಮೃದ್ಧ ಸಾಹಿತ್ಯ ರಚನೆಯಾಗಿ ಹತ್ತನೆಯ ಶತಮಾನ ಕನ್ನಡದ ಸುವರ್ಣ ಯುಗ ಎನಿಸಿತು. ಕವಿರಾಜ ಮಾರ್ಗದಲ್ಲಿಯೆ ಹಳಗನ್ನಡ ಎಂಬುದಾಗಿ ಕನ್ನಡದ ಹಳೆಯ ಅವಸ್ಥೆಯೊಂದನ್ನು ಸೂಚಿಸಲಾಗಿದೆ. ಶುದ್ಧ (ತಿರುಳು) ಕನ್ನಡ ಬಳಕೆಯಲ್ಲಿದ್ದ ಪ್ರದೇಶದ ಕೆಲವು ಸ್ಥಳಗಳನ್ನು ಶ್ರೀವಿಜಯ ಗುರುತಿಸುತ್ತಾನೆ. ಅವುಗಳಲ್ಲಿ ಪುಲಿಗೆರೆ(ಇಂದಿನ ಲಕ್ಷ್ಮೇಶ್ವರ), ಕೊಪಣ(ಇಂದಿನ ಕೊಪ್ಪಳ), ಒಕ್ಕುಂದ(ಇಂದಿನ ಒಕ್ಕುಂದ) ಮುಖ್ಯ-ವಾದುವುಗಳು. ೧೨ನೇ ಶತಮಾನದಲ್ಲಿ ಧರ್ಮಾಮೃತದ ಕರ್ತೃ ನಯಸೇನ ಪೊಸಗನ್ನಡ ಎಂಬ ಪ್ರಯೋಗ ಮಾಡುತ್ತಾನೆ. ೧೩ನೇ ಶತಮಾನದ ವೈಯಾಕರಣ ಕೇಶಿರಾಜ ಅಚ್ಚಗನ್ನಡ ಎಂಬ ಶಬ್ದ ಪ್ರಯೋಗವನ್ನು ಮಾಡಿದ್ದಾನೆ. ಶ್ರೀವಿಜಯ, ನಯಸೇನ, ಕೇಶಿರಾಜನು ಗ್ರಂಥಸ್ಥ ಕನ್ನಡವನ್ನು ದೃಷ್ಟಿಯಲ್ಲಿಟ್ಟುಕೊಂಡೆ ಪ್ರಾಯಃ ಕನ್ನಡದ ಅವಸ್ಥೆಗಳನ್ನು ಗುರುತಿಸಿದ್ದಾರೆ. ಕೇಶಿರಾಜನು ವೈಯಾಕರಣನಾಗಿದ್ದರಿಂದ ಮತ್ತು ಸೂಕ್ಷ್ಮ ನಿರೀಕ್ಷಣಾ ಬುದ್ಧಿಯವನಾಗಿದ್ದುದರಿಂದ ಅಲ್ಲಲ್ಲಿ ಕೆಲವಡೆ ಕೆಲಮಾತು ಹೇಳಿದ್ದಾನೆ. ಗ್ರಂಥಸ್ಥ ಭಾಷೆಗೂ ಆಡುನುಡಿಗೂ ಸಾಕಷ್ಟು ವ್ಯತ್ಯಾಸ ಕನ್ನಡದಲ್ಲಿದೆ. ಆಧುನಿಕರು ಭಾಷೆಯ ಜೀವಂತಿಕೆ ಆಡು ನುಡಿಯಲ್ಲಿಯೇ ಸ್ಪಷ್ಟವಾಗಿರುವುದರಿಂದ ಅದನ್ನೇ ವ್ಯಾಕರಣ ರಚನೆಗೆ ಬಳಸಿಕೊಳ್ಳುವುದು ಸೂಕ್ತ ಎಂದು ಅಭಿಪ್ರಾಯ ಪಡುತ್ತಾರೆ.

ಕನ್ನಡದಲ್ಲಿ ಪೂರ್ವದ ಹಳಗನ್ನಡ, ಹಳಗನ್ನಡ, ನಡುಗನ್ನಡ ಹಾಗೂ ಹೊಸಗನ್ನಡ ಎಂಬ ನಾಲ್ಕು ಅವಸ್ಥಾಭೇದಗಳನ್ನು ವಿದ್ವಾಂಸರು ಗುರುತಿಸುತ್ತಾರೆ.

೧. ಕವಿರಾಜಮಾರ್ಗದ ಪೂರ್ವಕಾಲದ ಕನ್ನಡ - ಪ್ರಾಚೀನ ಕನ್ನಡ
(ಇದನ್ನು ಪೂರ್ವದ ಹಳಗನ್ನಡವೆಂದೂ ಕರೆದಿದ್ದಾರೆ)
೨. ೧೦-೧೧ನೇ ಶತಮಾನದ ಕನ್ನಡ - ಹಳಗನ್ನಡ
೩. ೧೩ರಿಂದ ೧೬ನೇ ಶತಮಾನದವರೆಗಿನ ಕನ್ನಡ - ನಡುಗನ್ನಡ
೪. ೧೬ನೇ ಶತಮಾನದ ಈಚೆಗಿನ ಕನ್ನಡ - ಹೊಸಗನ್ನಡ

ಈ ಮೇಲಿನ ನಾಲ್ಕು ಅವಸ್ಥಾಂತರಗಳ ಕಾಲವನ್ನು ಅತ್ಯಂತ ನಿಖರವಾಗಿ ಗುರುತಿಸಲು ಸಾಧ್ಯವಿಲ್ಲವಾದರೂ ಈ ಅವಸ್ಥೆಗಳ ವಿಶಿಷ್ಟ ಲಕ್ಷಣಗಳನ್ನು ಗುರುತಿಸಬಹುದಾಗಿದೆ. ಮಹತ್ವದ ಕೆಲವು ವೈಶಿಷ್ಟಗಳು ಹೀಗಿವೆ :

## ಪ್ರಾಚೀನ ಕನ್ನಡ

೧. ಆಖ್ಯಾತ ಪ್ರತ್ಯಯ ಸ್ವರದ ದೀರ್ಘ ಪ್ರಯೋಗ :
ವಂದಾನ್, ಮುಡಿಪ್ಪಿದಾರ್, ಏರಿದಾರ್, ಕೊಟ್ಟಾರ್, ಅರಿದೋರ್

೨. ಸಪ್ತಮೀ ವಿಭಕ್ತಿ ಪ್ರತ್ಯಯ ಉಳ್ ಪ್ರಯೋಗ :
ನಾಡುಳ್, ಸಂಕಟದುಳ್

೩. ಷಷ್ಠೀ ವಿಭಕ್ತಿ ಪ್ರತ್ಯಯ 'ಆ' ಪ್ರಯೋಗ :
ಪಶುಪತಿಯಾ, ಮಂಗಳೀಸನಾ, ಏಳನೇಯಾ, ನರಕದಾ, ನವಿಲೂರಾ.

೪. ದ್ವಿತಿಯಾ ವಿಭಕ್ತಿ ಪ್ರತ್ಯಯ ದೀರ್ಘ ಪ್ರಯೋಗ :
ಸ್ವರ್ಗ್ಗಾಗ್ರಮಾನ್, ಇದಾನ್, ದೇಗುಲಮಾನ್, ಮಹಾಜನಮಾನ್

೫. ನಿಷೇದಾರ್ಥದಲ್ಲಿ ಸ್ವರ ದೀರ್ಘ ಪ್ರಯೋಗ :
ವಿತ್ತಿದಲ್ಲಿ ವೆಳೆಯಾದೆ ಕೊಡುಗೆ.

೬. ಲಿಪಿಯಲ್ಲಿ ಬಿಂದುವಿನ ಸ್ಥಾನದಲ್ಲಿ 'ನ್'ಕಾರ ಪ್ರಯೋಗ :
ಸುತನ್ಗೆ, ಒನ್ದು, ಪಿನ್ದು, ಸೇನ್ದ್ರಕ

೭. ಪೂರ್ಣ ಕ್ರಿಯಾಪದದಲ್ಲಿ ಲಿಂಗ-ವಚನ-ಕಾಲ ವಿವಕ್ಷೆಯಿಲ್ಲದೆ ರೂಪಗಳ ಪ್ರಯೋಗ ಬಾಹುಳ್ಯ :
ಇರ್ಕ್ಕುಂ, ಅಕ್ಕುಂ, ಬಗೆಗುಂ, ಉಲಿಗುಂ, ಬರ್ಕ್ಕುಂ

೮. ಉತ್ತಮ ಪುರುಷ ಬಹುವಚನ ಸರ್ವನಾಮಗಳಲ್ಲಿ ಸಮಾವೇಶಕ ಅಸಮಾವೇಶಕ ಎಂದು ಎರಡು ಬಗೆಯ ಪ್ರಯೋಗ :
ಅಂ, ಎಮ್ಮ, ಎಮಗೆ (ಅಸಮಾವೇಶಕ)
ನಾಂ, ನಮ್ಮ, ನಮಗೆ (ಸಮಾವೇಶಕ)

೯. 'ಬ' ಕಾರದ ಸ್ಥಾನದಲ್ಲಿ 'ವ' ಕಾರದ ಪ್ರಯೋಗ :
ವಿಟ್ಟಾರ್, ವಿಟ್ಟುದು, ವಿತ್ತಿದಲ್ಲಿ ವೆಳೆಯಾದೆ, ವೆಟ್ಟದುಳ

೧೦. 'ಇ' ಕಾರದ ಸ್ಥಾನದಲ್ಲಿ 'ಎ' ಕಾರ ಪ್ರಯೋಗ :
ಕಾದೆರೆದು, ಎರಿದು

೧೧. ವ್ಯಂಜನದ್ವಿತ್ತ್ವ ಬಾಹುಳ್ಯ :
ನಿರ್ವ್ವಿನೀತರಾ, ಸಾಸಿರ್ವ್ವರೆ, ಪಾರ್ವ್ವರುಂ
ಧರ್ಮ್ಮ, ಸರ್ವ್ವ, ಸ್ವರ್ಗ್ಗ

೧೨. ಉತ್ತಮ ಪುರುಷ ವಿಧ್ಯರ್ಥದಲ್ಲಿ 'ಗ'ಇಲ್ಲವೆ 'ಕ' ಪ್ರತ್ಯಯದ ಪ್ರಯೋಗ :
ಪುಟ್ಟಲ್ಕ, ರಕ್ಷಿಕ, ಕೊಳ್ಗ, ಕೆಡುಗ

೧೩. ಱ್ ಹಾಗೂ ೞ್ ಗಳನ್ನು ತಪ್ಪಿಲ್ಲದೆ ಪ್ರಯೋಗಿಸಲಾಗಿದೆ.

೧೪. 'ಪ' ಕಾರ 'ಹ' ಕಾರವಾಗದೇ ಉಳಿದುಕೊಂಡು ಬಂದಿದೆ (ಆದರೆ೬ನೇ ಶತಮಾನದ ಆರಂಭದ ವೇಳೆಗೆ ಪ್ > ಹ್ ಬದಲಾವಣೆ ಆರಂಭವಾಗಿದೆ).

## ಹಳಗನ್ನಡ

೧. 'ಪ್' ಕಾರದ ಸ್ಥಾನದಲ್ಲಿ 'ಹ್'ಕಾರ ಪ್ರಯೋಗ (ಸ್ವರಗಳ ಮಧ್ಯದಲ್ಲಿ)
ಅಪ್ಪನ್> ಅಹನ್, ಅಪ್ಪುದು >ಅಹುದು

೨. 'ವ್'ಕಾರದ ಸ್ಥಾನದಲ್ಲಿ 'ಬ್'ಕಾರ ಪ್ರಯೋಗ
ವಂದುದು>ಬಂದುದು

೩. ಆಖ್ಯಾತ ರೂಪಗಳಲ್ಲಿ ಸ್ವರ ಬದಲಾವಣೆಗಳಾಗಿವೆ.

(ಅ) ಒ > ಅ — ಅಳಿದೊನೆ > ಅಳಿದನೆ

(ಬ) ಆ> ಅ — ಮುಡಿಪ್ಪಿದಾರ್ > ಮುಡಿಪ್ಪಿದರ್

೪. ಸಂಯುಕ್ತಾಕ್ಷರಗಳಲ್ಲಿನ ದ್ವಿತ್ವ ಹ್ರಸ್ವವಾಗುವುದು.
ಊರ್ಗ್ಗೆ > ಊರ್ಗೆ

## ನಡುಗನ್ನಡ

೧. 'ಟ್'ಕಾರದ ಸ್ಥಾನದಲ್ಲಿ 'ಳ'ಕಾರ ಪ್ರಯೋಗ (ಸ್ವರಗಳ ಮಧ್ಯದಲ್ಲಿ)
ಬಾಟ್ > ಬಾಳು ಇರಿ > ಇಟಿ

೨. ಸಬಿಂದುಕ ಶಬ್ದಗಳು ಅಬಿಂದುಕಗಳಾಗುವುದು
ಬೆಡಂಗು> ಬೆಡಗು, ಊರಿಂಗೆ >ಊರಿಗೆ, ಕೆಲಂಬರ >ಕೆಲಬರ

೩. ಸರ್ವನಾಮಗಳಲ್ಲಿನ 'ಮ' ಕಾರ 'ವ' ಕಾರವಾಗುವುದು.
ನಾಮ್ > ನಾವು, ತಾಮ್ > ತಾವು, ನೀಮ್ > ನೀವು

೪. ವ್ಯಂಜನಾಂತಗಳು ಸ್ವರಾಂತಗಳಾಗುವವು
ಕಣ್> ಕಣ್ಣು, ತಿನ್> ತಿನ್ನು, ಊರ್ > ಊರು

೫. ಸಂಸ್ಕೃತ ಪದಗಳ ಬದಲಾಗಿ ತದ್ಭವ, ಅಪಭ್ರಂಶ ಪದಗಳ ಪ್ರಯೋಗ ಹೆಚ್ಚು.
ಸ್ಮಶಾನ > ಮಸಣ, ಭಕ್ತಿ > ಭಕುತಿ, ಆಕಾಶ > ಆಗಸ, ಸ್ಥಾನ > ತಾಳ

೬. 'ಪ'ಕಾರದ ಸ್ಥಾನದಲ್ಲಿ 'ಹ'ಕಾರ ಬಳಕೆ
ಪುಲಿ > ಹುಲಿ, ಪಂದಿ > ಹಂದಿ, ಪಲಗೆ > ಹಲಗೆ, ಪಾರ್ವ > ಹಾರುವ

೭. 'ಲ'ಕಾರ ಸ್ಥಾನದಲ್ಲಿ 'ಳ'ಕಾರ ಬಳಕೆ
ಬೆರಲ್ > ಬೆರಳ್, ಕೊರಲ್ > ಕೊರಳ್

## ಹೊಸಗನ್ನಡ

೧. ಟ್ ಹಾಗೂ ಱ್ ಬಳಕೆ ನಿಂತು ಹೋದುದು

೨. ಇಂಗ್ಲೀಷ್, ಪಾರ್ಸಿ, ಪೋರ್ತುಗೀಜ, ಉರ್ದು, ಮರಾಠಿ, ಮುಂತಾದ ಭಾಷೆಗಳ ಪ್ರಭಾವಕ್ಕೆ ಒಳಗಾದುದು.

೩. ನಿಷೇಧ ಪ್ರತ್ಯಯದ ಸ್ಥಾನದಲ್ಲಿ 'ಇಲ್ಲ' ಎಂಬ ನಿಷೇಧ ರೂಪದ ಬಳಕೆ
ನೋಡ : ನೋಡನು ನೋಡುವುದಿಲ್ಲ
ಮಾಡ : ಮಾಡಳು ಮಾಡುವುದಿಲ್ಲ

೪. ದೀರ್ಘಸ್ವರದ ಮುಂದೆ ವ್ಯಂಜನ ದ್ವಿತ್ವದ ಬಳಕೆ ನಿಂತುಹೋದದ್ದು.
ಊರ್ಗ್ಗೆ > ಊರಿಗೆ

೫. ಪ್ರಾದೇಶಿಕ ಮತ್ತು ಸಾಮಾಜಿಕ ಉಪಭಾಷೆಗಳ ಸಂಖ್ಯೆ ಹೆಚ್ಚಾದದ್ದು.

೬. ವರ್ಣಮಾಲೆಯಲ್ಲಿ ವರ್ಣಗಳ ಸಂಖ್ಯೆ, ಸರ್ವನಾಮ, ಆಖ್ಯಾತ ಪ್ರತ್ಯಯಗಳು ಮುಂತಾದ ಅನೇಕ ವ್ಯಾಕರಣಾಂಶಗಳಲ್ಲಿ ಬದಲಾವಣೆ.

ಹೀಗೆ ಕನ್ನಡ ಭಾಷೆ ಕ್ರಿ.ಶ. ೧೮೫೦ ರಿಂದ ಈಚೆಗೆ ಸಾಕಷ್ಟು ಸಮೃದ್ಧವಾಗಿ ಪ್ರಾದೇಶಿಕ, ಸಾಮಾಜಿಕ, ಪ್ರಭೇದಗಳ ವೈವಿಧ್ಯತೆಗಳೊಂದಿಗೆ ವ್ಯಾಪಕವಾಗಿ ಬೆಳೆದು ಬಂದಿದೆ.

ರಾಜಕೀಯ ಸ್ಥಿತ್ಯಂತರಗಳಿಂದಾಗಿ ಕಾಲಕಾಲಕ್ಕೆ ಕನ್ನಡ ಭಾಷೆಯು ಅನ್ಯಭಾಷಾ ಪ್ರಭಾವಕ್ಕೆ ಒಳಗಾಯಿತು. ಅದರೊಂದಿಗೆ ಪ್ರಾದೇಶಿಕ ವ್ಯತ್ಯಾಸಗಳೂ ಗಮನಾರ್ಹವಾಗಿ ಕನ್ನಡ ಭಾಷೆಯಲ್ಲಿ ಕಾಣಿಸಿಕೊಂಡವು. ಉದಾ: ಮುಸಲ್ಮಾನ ಅರಸರ ಆಳ್ವಿಕೆಯಿಂದಲೂ ಕರ್ನಾಟಕದ ಈಶ್ಯಾನ ಹಾಗೂ ದಕ್ಷಿಣ ಭಾಗದ ಪ್ರದೇಶಗಳಲ್ಲಿ ಅದರಲ್ಲೂ ದಕ್ಷಿಣಕ್ಕಿಂತ ಈಶ್ಯಾನ ಪ್ರದೇಶದ ಕನ್ನಡದ ಮೇಲೆ ಉರ್ದು ಹೆಚ್ಚು ದಟ್ಟವಾದ ಪ್ರಭಾವ ಬೀರಿತ್ತು. ಕರ್ನಾಟಕದಾದ್ಯಂತ ಇಂಗ್ಲೀಷ್ ಭಾಷಿಕರ ಆಳ್ವಿಕೆ ಸಮಾನವಾಗಿದ್ದರೂ ದಕ್ಷಿಣ ಕರ್ನಾಟಕದ ಕನ್ನಡದ ಮೇಲೆ ಅದರಲ್ಲೂ ಪಟ್ಟಣ ಪ್ರದೇಶದಲ್ಲಿನ ಜನರು ಬಳಸುವ ಕನ್ನಡ ಭಾಷೆಯ ಮೇಲೆ ಇಂಗ್ಲೀಷ್ ಬಹಳ ದಟ್ಟವಾದ ಪರಿಣಾಮ ಬೀರಿತು. ಹೀಗೆಯೆ ಪ್ರಾಚೀನ ಕಾಲದಿಂದಲೂ ಕರ್ನಾಟಕದ ಪ್ರದೇಶದಲ್ಲಿರುವ ತುಳು, ಕೊಡವ, ಕೊಂಕಣಿ, ಬಡಗ, ಸೋಲಿಗ, ಮುಂತಾದ ಭಾಷೆಗಳು ಆಯಾ ಪ್ರದೇಶಗಳ ಕನ್ನಡ ಭಾಷೆಯ ಮೇಲೆ ಪ್ರಭಾವ ಬೀರಿದವು. ಈ ಭಾಷೆಗಳಲ್ಲದೇ ಗಡಿ ಭಾಗದಲ್ಲಿ ತಮಿಳು, ಮಲಯಾಳಂ, ತೆಲುಗು, ಮರಾಠಿ, ಭಾಷೆಗಳ ಪ್ರಭಾವ ಆಯಿತು. ಅಂತೆಯೇ ಕನ್ನಡ ಭಾಷೆ ಈ ಎಲ್ಲ ಭಾಷೆಗಳಿಂದಲೂ ಅನೇಕ ಶಬ್ದಗಳನ್ನು ಸ್ವೀಕರಿಸಿದೆ.

೧೯೫೬ ನವಂಬರ್ ೧ ರಂದು ಕನ್ನಡ ಭಾಷೆಯನ್ನಾಡುವ ಎಲ್ಲರಿಗಾಗಿ ಕರ್ನಾಟಕ ರಾಜ್ಯ ಪ್ರತ್ಯೇಕ ರಾಜ್ಯವಾದಾಗ ಕನ್ನಡ ಭಾಷೆ ಕರ್ನಾಟಕದ ರಾಜ್ಯಭಾಷೆಯಾಯಿತು. ರಾಜ್ಯ ಪ್ರತ್ಯೇಕವಾದರೂ ಪ್ರಾಚೀನ ಕಾಲದಿಂದಲೂ ಕನ್ನಡ ಭಾಷೆಯದ್ದೇ ಆಗಿದ್ದ ಹಲವು ಪ್ರದೇಶಗಳು ಕರ್ನಾಟಕದಿಂದ ಹೊರಗೆ ಉಳಿದವು. ಸೊಲ್ಲಾಪುರ, ಅಕ್ಕಲಕೋಟ, ಜತ್ತ ಕಾಸರಗೋಡು, ಅದವಾನಿ ಇವೇ ಮುಂತಾದ ಅನೇಕ ಪ್ರದೇಶಗಳು ಅನ್ಯಭಾಷಾ ರಾಜ್ಯಗಳಿಗೆ ಹಂಚಹೋದವು. ಒಂಬತ್ತನೇ ಶತಮಾನದಲ್ಲಿ ಕಾವೇರಿಯಿಂದ ಗೋದಾವರಿಯವರೆಗೆ ವ್ಯಾಪಿಸಿದ್ದ ಕನ್ನಡ ಪ್ರದೇಶ ೧೯೫೬ಕ್ಕೆ ಮೊಟಕಾಗಿ ಕಾವೇರಿಯಿಂದ ಕಾರಂಜಾ ನದಿಯವರೆಗೆ ಮಾತ್ರ ಉಳಿಯಿತು.

## ೩. ಕನ್ನಡ ಭಾಷೆಯ ಉಪಭಾಷೆಗಳು

ಹೊಸಗನ್ನಡ ಭಾಷೆ ಅನೇಕ ಉಪಭಾಷೆಗಳನ್ನು, ಪ್ರಭೇದಗಳನ್ನು ಒಳಗೊಂಡಿದೆ. ಹಲವು ವ್ಯಕ್ತಿಗಳಿಂದ ಕೆಲವು ಭಾಷಾ ವೈಶಿಷ್ಟ್ಯಗಳನ್ನು ಒಳಪಡಿಸಿಕೊಂಡು ನಿರ್ದಿಷ್ಟ ಪ್ರದೇಶ, ಇಲ್ಲವೆ ಸಾಮಾಜಿಕ ಪರಿಸರದಲ್ಲಿ ಬಳಸಲ್ಪಡುವ ಭಾಷೆಯನ್ನು ಸಾಮಾನ್ಯವಾಗಿ ಪ್ರಭೇದ ಭಾಷೆ ಎಂದು ಕರೆಯುತ್ತಾರೆ. ಇಂತಹ ವೈಶಿಷ್ಟ್ಯಗಳು ಹೆಚ್ಚಿರುವ ಒಂದೇ ಭಾಷೆಯಲ್ಲಿರುವ ಪ್ರಭೇದಗಳ ಗುಂಪನ್ನು ಉಪಭಾಷೆ ಎನ್ನುತ್ತಾರೆ. ಕನ್ನಡ ಭಾಷೆಯಲ್ಲಿ ನಾಲ್ಕು ಪ್ರಾದೇಶಿಕ, ಹತ್ತು ಸಾಮಾಜಿಕ ಉಪಭಾಷೆಗಳನ್ನು ಗುರುತಿಸಲಾಗಿದೆ.

**ಉಪಭಾಷೆಗಳು**

**ಅ) ಭೌಗೋಲಿಕ :**

೧. ಕಲಬುರ್ಗಿ ಕನ್ನಡ
೨. ಧಾರವಾಡ ಕನ್ನಡ
೩. ಮಂಗಳೂರು ಕನ್ನಡ
೪. ಮೈಸೂರು ಕನ್ನಡ

**ಬ) ಸಾಮಾಜಿಕ :**

೧. ಸೋಲಿಗ ಕನ್ನಡ ೨. ದೀವರ ಕನ್ನಡ ೩. ಬಡಗ ಕನ್ನಡ
೪. ಹವ್ಯಕ ಕನ್ನಡ ೫. ಬಂಟ ಕನ್ನಡ ೬. ಮುಸ್ಲಿಂ ಕನ್ನಡ
೭. ಕೊಡವ ಕನ್ನಡ ೮. ಹಾಲಕ್ಕಿ ಕನ್ನಡ ೯. ಕೋಟ ಕನ್ನಡ ೧೦. ಕೊರಗ ಕನ್ನಡ

## ೪. ಕನ್ನಡ ಭಾಷಾ ಪ್ರಭೇದಗಳು

**ಪೀಠಿಕೆ**

ಒಬ್ಬ ವ್ಯಕ್ತಿ ವಿವಿಧ ಪರಿಸರಗಳಲ್ಲಿ ಮಾತನಾಡುವ ಅವನ ಒಟ್ಟು ಭಾಷೆಯನ್ನು ವ್ಯಕ್ತಿಭಾಷೆ ಎಂದು ಕರೆಯುತ್ತಾರೆ. ಅಂಥ ಹಲವಾರು ವ್ಯಕ್ತಿಗಳು ಒಂದು ನಿರ್ದಿಷ್ಟ ಪ್ರದೇಶದಲ್ಲಿ ನಿರ್ದಿಷ್ಟ ಉದ್ದೇಶಕ್ಕಾಗಿ ವಿವಿಧ ಪರಿಸರಗಳಲ್ಲಿ ಕಾಲಕಾಲಕ್ಕೆ ತಮ್ಮದೇ ಆದ ಕೆಲವು ಭಾಷಾ ಬಳಕೆಯ ವೈಶಿಷ್ಟ್ಯಗಳನ್ನು ಹೊಂದಿ ಬಳಸುವ ಭಾಷೆಯನ್ನು ಪ್ರಭೇದ ಭಾಷೆ ಎಂದು ಕರೆಯುತ್ತಾರೆ. ಇಂಥ ಹಲವು ಪ್ರಭೇದ ಭಾಷೆಗಳು ಕಾಲ, ಪ್ರದೇಶ, ಉದ್ದೇಶ, ಬಳಸುವ ವ್ಯಕ್ತಿ ಸಮೂಹ ಇವುಗಳಿಗೆ ಅನುಗುಣವಾಗಿ ವೈವಿಧ್ಯಮಯವಾಗಿರುತ್ತವೆ. ಪ್ರಭೇದ ಭಾಷಾ ಪ್ರದೇಶದ ವ್ಯಾಪ್ತಿ ಗ್ರಾಮ, ತಾಲ್ಲೂಕು ಅತಿ ಹೆಚ್ಚೆಂದರೆ ಒಂದು ಜಿಲ್ಲೆಗೆ ಸೀಮಿತವಾಗಿರುತ್ತದೆ. ಪ್ರಭೇದ ಭಾಷೆಯ ಮೇಲಾಗುವ ಪ್ರಭಾವ ಬದಲಾವಣೆಗಳು ಬರಬರುತ್ತ ಉಪಭಾಷೆ ಹಾಗೂ ಅನಂತರ ಭಾಷೆಯ ಮೇಲೆ ಉಂಟಾಗುತ್ತದೆ. ಪ್ರಭೇಧ ಭಾಷೆಗಳು ಏಕಕಾಲಕ್ಕೆ ತಮ್ಮ ವೈಶಿಷ್ಟ್ಯಗಳೊಡನೆ ಇನ್ನಿತರ ಹಲವು ಸುತ್ತಲಿನ ಪ್ರಭೇದ ಭಾಷೆಗಳಲ್ಲಿನ ವೈಶಿಷ್ಟಗಳನ್ನು ಒಟ್ಟಾಗಿ ಹೊಂದಿ ಒಂದು ವಿಶಾಲ ಪ್ರದೇಶದಲ್ಲಿ ಬಳಕೆಯಾಗುತ್ತಿದ್ದರೆ ಆ ಎಲ್ಲಾ ಪ್ರಭೇದ ಭಾಷೆಗಳನ್ನು ಒಟ್ಟಾಗಿ ಒಂದು ಉಪಭಾಷೆ ಎಂದು ಹೆಸರಿಸಲಾಗುತ್ತದೆ. ಪ್ರಭೇದ ಭಾಷೆಗಳು ಭಾಷಾಬಳಕೆಯ ಕೇಂದ್ರ ವ್ಯಕ್ತಿ ಹಾಗೂ ಸಮೂಹ ಭಾಷಾ ವ್ಯಕ್ತಿಗಳ ಒಟ್ಟು ಭಾಷಾ ಬಳಕೆಯ ಮಧ್ಯ ಸ್ಥಾನದಲ್ಲಿ ನಿಲ್ಲುತ್ತವೆ. ನಂತರ, ಭಾಷಾ ಬಳಕೆಯ ಸಮೂಹ ಹಾಗೂ ಪ್ರದೇಶ ವ್ಯಾಪ್ತಿ ಹೆಚ್ಚದಂತೆ ಪರಸ್ಪರ ಹೋಲುವ ಉಪಭಾಷೆಗಳ ಸಮೂಹ ಒಂದು ದೊಡ್ಡ ಮಹತ್ವದ ಸ್ವತಂತ್ರ ಭಾಷಾ ಸ್ಥಾನವನ್ನು ಪಡೆಯುತ್ತದೆ. ಭಾಷಾ ಪ್ರಭೇದಗಳು ಒಂದು ಕಾಲದ, ಒಂದು ಪ್ರದೇಶದ, ಉದ್ದೇಶಕ್ಕನು- ಗುಣವಾದ ಭಾಷಾಬಳಕೆಯ ಅವಸ್ಥೆಯನ್ನು ಸೂಚಿಸುತ್ತವೆ. ಅಂತೆಯೇ ಎಷ್ಟೋ ಸಲ ಅವುಗಳನ್ನು ಅವಸ್ಥಾ ಪ್ರಭೇದಗಳೆಂದೂ ಕರೆಯುವ ವಾಡಿಕೆ ಇದೆ. ಪ್ರಭೇದಗಳು ಹುಟ್ಟಿಕೊಳ್ಳಲು ಅನೇಕ ಅಂಶಗಳು ಕಾರಣ- ವಾಗುತ್ತವೆ. ಸಾಮಾಜಿಕ, ಭೌಗೋಲಿಕ, ರಾಜಕೀಯ ಅನ್ಯಭಾಷಾ ಪ್ರಭಾವ ಇತ್ಯಾದಿ ಅಂಶಗಳು ಇವುಗಳಲ್ಲಿ ಪ್ರಮುಖವಾದವುಗಳು.

ಕನ್ನಡ ಭಾಷಾ ಪ್ರಭೇದಗಳನ್ನು ವಿಂಗಡಿಸಿ ಪಟ್ಟಿಮಾಡಿ ಹೀಗೆ ಹೇಳಬಹುದು.

**ಭೌಗೋಲಿಕ ಕನ್ನಡ ಪ್ರಭೇಧ ಭಾಷೆಗಳು :**

೧. ಕರಾವಳಿ ಕನ್ನಡ ೨. ಮಲೆನಾಡು ಕನ್ನಡ ೩. ಮೈಸೂರು ಕನ್ನಡ ೪. ದಾವಣಗೆರೆ ಕನ್ನಡ
೫. ಬಳ್ಳಾರಿ ಕನ್ನಡ ೬. ರಾಯಚೂರು ಕನ್ನಡ ೭. ಬೀದರ ಕನ್ನಡ ೮. ವಿಜಾಪುರ ಕನ್ನಡ
೯. ಬೆಳಗಾವಿ ಕನ್ನಡ ೧೦. ಕೊಡಗು ಕನ್ನಡ ೧೧. ಕೋಲಾರ ಕನ್ನಡ ೧೨. ಕಾಸರಗೋಡು ಕನ್ನಡ
೧೩. ಆದವಾನಿ ಕನ್ನಡ ೧೪. ಅಕ್ಕಲಕೋಟ ಕನ್ನಡ ೧೫. ಮದ್ರಾಸ ಕನ್ನಡ ೧೬. ಮಧುರೈ ಕನ್ನಡ
೧೭. ದಿಲ್ಲಿ ಕನ್ನಡ ೧೮. ಮುಂಬೈ ಕನ್ನಡ ೧೯. ಗೋವಾ ಕನ್ನಡ ೨೦. ತಿರುವನಂತಪುರ ಕನ್ನಡ.

## ಸಾಮಾಜಿಕ ಕನ್ನಡ ಪ್ರಭೇದ ಭಾಷೆಗಳು

೧. ಕಲಬುರ್ಗಿ ಮುಸ್ಲಿಂ ಕನ್ನಡ ೨. ಕಲಬುರ್ಗಿ ಬ್ರಾಹ್ಮಣರ ಕನ್ನಡ ೩. ಕಲಬುರ್ಗಿ ವೀರಶೈವರ ಮತ್ತು ಇತರ ಧರ್ಮೀಯರ ಕನ್ನಡ ೪. ಮೈಸೂರು ಬ್ರಾಹ್ಮಣರ ಕನ್ನಡ ೫. ಮೈಸೂರು ಬ್ರಾಹ್ಮಣೇತರ ಕನ್ನಡ ೬. ಮೈಸೂರು ಮುಸ್ಲಿಮರ ಕನ್ನಡ ೭. ಧಾರವಾಡ ವೀರಶೈವರ ಕನ್ನಡ ೮. ಧಾರವಾಡ ಬ್ರಾಹ್ಮಣರ ಕನ್ನಡ ೯. ಧಾರವಾಡ ಇತರೇ ಧರ್ಮೀಯರ ಕನ್ನಡ ೧೦. ಕರಾವಳಿ ಬ್ರಾಹ್ಮಣರ ಕನ್ನಡ ೧೧. ಕರಾವಳಿ ಬ್ರಾಹ್ಮಣೇತರರ ಕನ್ನಡ ೧೨. ಮಲೆನಾಡು ಬ್ರಾಹ್ಮಣರ ಕನ್ನಡ ೧೩. ಮಲೆನಾಡು ಬ್ರಾಹ್ಮಣೇತರರ ಕನ್ನಡ ೧೪. ದಾವಣಗೆರೆ ಬ್ರಾಹ್ಮಣರ ಕನ್ನಡ ೧೫. ದಾವಣಗೆರೆ ಬ್ರಾಹ್ಮಣೇತರರ ಕನ್ನಡ ೧೬. ರಾಯಚೂರು ಬ್ರಾಹ್ಮಣರ ಕನ್ನಡ ೧೭. ರಾಯಚೂರು ಬ್ರಾಹ್ಮಣೇತರರ ಕನ್ನಡ ೧೮. ರಾಯಚೂರು ಮುಸ್ಲಿಮರ ಕನ್ನಡ ೧೯. ಬೀದರ ಬ್ರಾಹ್ಮಣರ ಕನ್ನಡ ೨೦. ಬೀದರ ವೀರಶೈವರ ಕನ್ನಡ ೨೧. ಬೀದರ ಮುಸ್ಲಿಮರ ಕನ್ನಡ ೨೨. ವಿಜಾಪುರ ವೀರಶೈವರ ಕನ್ನಡ ೨೩. ವಿಜಾಪುರ ವೀರಶೈವೇತರ ಕನ್ನಡ ೨೪. ವಿಜಾಪುರ ಮುಸ್ಲಿಮರ ಕನ್ನಡ ೨೫. ಬೆಳಗಾವಿ ವೀರಶೈವರ ಕನ್ನಡ ೨೬. ಬೆಳಗಾವಿ ಬ್ರಾಹ್ಮಣರ ಕನ್ನಡ ೨೭. ಕೊಡಗು ಬ್ರಾಹ್ಮಣರ ಕನ್ನಡ ೨೮. ಕೊಡಗು ಬ್ರಾಹ್ಮಣೇತರರ ಕನ್ನಡ ೨೯. ಕೋಲಾರ ತಮಿಳರ ಕನ್ನಡ ೩೦. ಕೋಲಾರ ಬ್ರಾಹ್ಮಣರ ಕನ್ನಡ ೩೧. ಕೋಲಾರ ಬ್ರಾಹ್ಮಣೇತರರ ಕನ್ನಡ ೩೨. ಕಾಸರಗೋಡ ಬ್ರಾಹ್ಮಣರ ಕನ್ನಡ ೩೩. ಕಾಸರಗೋಡ ಬ್ರಾಹ್ಮಣೇತರರ ಕನ್ನಡ ೩೪. ಆದವಾನಿ ಬ್ರಾಹ್ಮಣರ ಕನ್ನಡ ೩೫. ಆದವಾನಿ ಬ್ರಾಹ್ಮಣೇತರರ ಕನ್ನಡ ೩೬. ಅಕ್ಕಲಕೋಟ ಬ್ರಾಹ್ಮಣರ ಕನ್ನಡ ೩೭. ಅಕ್ಕಲಕೋಟ ಬ್ರಾಹ್ಮಣೇತರರ ಕನ್ನಡ ೩೮. ಅಕ್ಕಲಕೋಟ ಮರಾಠರ ಕನ್ನಡ ೩೯. ಮದ್ರಾಸ ಬ್ರಾಹ್ಮಣರ ಕನ್ನಡ ೪೦. ಮದ್ರಾಸ ಬ್ರಾಹ್ಮಣೇತರರ ಕನ್ನಡ ೪೧. ಮದ್ರಾಸ ತಮಿಳರ ಕನ್ನಡ ೪೨. ಮಧುರೈ ಬ್ರಾಹ್ಮಣರ ಕನ್ನಡ ೪೩. ಮಧುರೈ ಬ್ರಾಹ್ಮಣೇತರರ ಕನ್ನಡ ೪೪. ಮಧುರೈ ತಮಿಳರ ಕನ್ನಡ ೪೫. ಮುಂಬೈ ಬ್ರಾಹ್ಮಣರ ಕನ್ನಡ ೪೬. ಮುಂಬೈ ಬ್ರಾಹ್ಮಣೇತರರ ಕನ್ನಡ ೪೭. ತಿರುವನಂತಪುರ ಬ್ರಾಹ್ಮಣರ ಕನ್ನಡ ೪೮. ತಿರುವನಂತಪುರ ಬ್ರಾಹ್ಮಣೇತರರ ಕನ್ನಡ ೪೯. ಗೋವಾ ಬ್ರಾಹ್ಮಣರ ಕನ್ನಡ ೫೦. ಗೋವಾ ಬ್ರಾಹ್ಮಣೇತರರ ಕನ್ನಡ ೫೧. ದಿಲ್ಲಿ ಬ್ರಾಹ್ಮಣರ ಕನ್ನಡ ೫೨. ದಿಲ್ಲಿ ಬ್ರಾಹ್ಮಣೇತರರ ಕನ್ನಡ ೫೩. ಒಕ್ಕಲಿಗ ಕನ್ನಡ ೫೪. ಹರಕಂತೆ ಕನ್ನಡ ೫೫. ಕುಮಾರ ಕನ್ನಡ ೫೬. ಪಂತ ಕನ್ನಡ ೫೭. ಮಾಪಿಳ್ಳೈ ಕನ್ನಡ ೫೮. ಇರುಳ ಕನ್ನಡ ೫೯. ಕೊರಗ ಕನ್ನಡ ೬೦. ಮುಕ್ರಿ ಕನ್ನಡ

ಈ ಪಟ್ಟಿಯನ್ನು ಗಮನಿಸಿದರೆ ಕನ್ನಡ ಭಾಷೆಯ ವೈವಿಧ್ಯ ಎಷ್ಟು ವ್ಯಾಪಕವಾಗಿದೆ ಎಂಬ ವಿಷಯದ ಅರಿವುಂಟಾಗುತ್ತದೆ. ಆಡುನುಡಿಯಲ್ಲಿ ಭಾಷಾಪ್ರಭೇದಗಳನ್ನು ಸ್ಪಷ್ಟವಾಗಿ ಗುರುತಿಸಬಹುದಾಗಿದೆ. ಶಿಷ್ಟ ಕನ್ನಡದಲ್ಲಿ ಭಾಷಾ ಪ್ರಭೇದಗಳನ್ನು ಗುರುತಿಸುವುದು ಕಷ್ಟ. ಉದಾಹರಣೆಗೆ: ನಾನೂ ಕೂಡ ಬರುತ್ತೇನೆ ಎಂಬ ಶಿಷ್ಟ ಕನ್ನಡ ವಾಕ್ಯ ವಿವಿಧ ಪ್ರಭೇದಗಳಲ್ಲಿ ಈ ಕೆಳಗಿನಂತೆ ಆಡುನುಡಿಯಲ್ಲಿ ಬಳಕೆಗೊಳ್ಳುತ್ತದೆ.

ನಾ ಭೀ ಬರ್ತಾ, ನಾನೂ ಬರ್ತೀನಿ, ನಾನೂ ಬರ್ತೇನೆ, ನಾನೆ ಕೂಡ ಬತ್ತೆ, ನಾನ ಭೀ ಹೊಂಟೀನಿ ಇಂತಹ ನುಡಿ ಪ್ರಭೇದಗಳನ್ನು ನಾವು ಕನ್ನಡ ಭಾಷಾ ಬಳಕೆಯಿರುವ ಬೇರೆ ಬೇರೆ ಪ್ರದೇಶಗಳಲ್ಲಿ ಕಾಣಬಹುದು.

ಕನ್ನಡದ ಪ್ರಮುಖ ಭಾಷಾ ಪ್ರಭೇದಗಳನ್ನು ಸ್ಥೂಲವಾಗಿ ಜಿಲ್ಲಾವಾರು ಗುರುತಿಸಿ ಅವುಗಳ ಹುಟ್ಟಿಗೆ ಕಾರಣವಾಗಿರುವ ಅಂಶಗಳನ್ನು ಮುಂದೆ ವಿವರಿಸಲಾಗಿದೆ. ಒಂದೊಂದು ಜಿಲ್ಲೆಯಲ್ಲೂ ಮತ್ತೆ ಇನ್ನೂ ಕೆಲ ಕೆಲವು ಪ್ರಭೇದಗಳನ್ನು ಗುರುತಿಸಬಹುದು. ಉದಾಹರಣೆಗೆ: ಕಲಬುರ್ಗಿ ಜಿಲ್ಲೆಯಲ್ಲಿ ಯಾದಗಿರಿ, ಚಿಂಚೋಳಿ, ಅಳಂದ ಹಾಗೂ ಜೇವರ್ಗಿ ಪ್ರದೇಶಗಳಲ್ಲಿ ನಾಲ್ಕು ಭೌಗೋಲಿಕ ಪ್ರಭೇದ ಭಾಷೆಗಳನ್ನು

ಗುರುತಿಸಬಹುದಾಗಿದೆ. ಒಟ್ಟು ಹತ್ತು ತಾಲ್ಲೂಕುಗಳ ವಿಶಾಲವಾದ ಪ್ರದೇಶ ಈ ನಾಲ್ಕು ಪ್ರಭೇದಗಳಲ್ಲಿ ಒಳಗೊಳ್ಳುತ್ತದೆ. ಹಾಗೆಯೆ ಬೀದರ ಜಿಲ್ಲೆಯಲ್ಲಿ ಪ್ರಮುಖ ಮೂರು ಭೌಗೋಲಿಕ ಪ್ರಭೇದ ಭಾಷೆಗಳು ದೊರೆಯುತ್ತವೆ. ಸಾಮಾಜಿಕ ಪ್ರಭೇದಗಳನ್ನು ಪ್ರತ್ಯೇಕವಾಗಿ ಗುರುತಿಸಬಹುದು. ಇದೇ ರೀತಿ ಕರ್ನಾಟಕದ ಹಾಗೂ ಕರ್ನಾಟಕದ ಹೊರಗಡೆ ಬಳಕೆಯಲ್ಲಿರುವ ಪ್ರಾದೇಶಿಕ ಹಾಗೂ ಸಾಮಾಜಿಕ ಪ್ರಭೇದ ಭಾಷೆಗಳನ್ನು ಗುರುತಿಸಬಹುದು. ಮೇಲೆ ಪಟ್ಟಿಮಾಡಿದ ಪ್ರಭೇದ ಭಾಷೆಗಳನ್ನು ಜಿಲ್ಲಾವಾರು ವಿಂಗಡಿಸಿ ಅವು ಹೇಗೆ ಅಸ್ತಿತ್ವದಲ್ಲಿವೆ ಅವು ಹುಟ್ಟಿಕೊಳ್ಳಲು ಪ್ರಮುಖ ಕಾರಣಗಳೇನು? ಎಂಬ ಕೆಲವು ವಿಚಾರಗಳನ್ನು ಇಲ್ಲಿ ವಿವರಿಸಲಾಗಿದೆ.

ಕನ್ನಡ ಭಾಷೆಯಲ್ಲಿ ಇಷ್ಟೊಂದು ದೇಸಿ ಕನ್ನಡ ಭಾಷೆಯ ಪ್ರಭೇದಗಳು ಇದ್ದರೂ ಎಲ್ಲಾ ಪ್ರಭೇದಗಳಿಗೂ ಸಾಮಾನ್ಯವಾಗಿರುವ ಶಿಷ್ಟ ಕನ್ನಡ ಭಾಷೆಯೊಂದಿದೆ. ಗ್ರಂಥಸ್ಥವಾಗಿರುವುದು ಇದೇ ಶಿಷ್ಟ ಭಾಷೆ. ಕೆಲವು ಸಲ ಕೆಲವು ಗ್ರಂಥಕಾರರು ತಮ್ಮ ಗ್ರಂಥಗಳಲ್ಲಿ ತಮ್ಮ ತಮ್ಮ ಭಾಷಾ ಪ್ರಭೇದಗಳನ್ನು ಬಳಸಿರುವುದುಂಟು. ಆದರೆ ಸಾಮಾನ್ಯವಾಗಿ ಗ್ರಂಥಗಳಲ್ಲಿರುವ ಶಿಷ್ಟಕನ್ನಡ ಎಲ್ಲೆಡೆ ಸಮಾನವಾಗಿದೆ. ಈ ಶಿಷ್ಟ ಕನ್ನಡ ಭಾಷೆಯಿಂದಲೇ ದಿಲ್ಲಿಯಿಂದ ಕನ್ಯಾಕುಮಾರಿವರೆಗೆ ವಿವಿಧ ಪ್ರದೇಶಗಳಲ್ಲಿ ಇರುವ ಕನ್ನಡ ಭಾಷೆಯನ್ನು ಬಳಸುವವರೆಲ್ಲರೂ ತಾವೆಲ್ಲ ಒಂದೇ ಕನ್ನಡ ಭಾಷಿಕರು ಎಂಬ ಭಾವವನ್ನು ತಾಳುವಂತೆ ಆಗಿದೆ.

ಭೌಗೋಲಿಕ ಪ್ರದೇಶ, ಸಾಮಾಜಿಕ ಸಾಂಸ್ಕೃತಿಕ ಅಂಶಗಳು ಹಾಗೂ ಪರಭಾಷಾ ಪ್ರಭಾವ ಇವುಗಳಿಂದಾಗಿ ಕನ್ನಡ ಭಾಷೆಯಲ್ಲಿ ಉಪಭಾಷೆಗಳು, ಪ್ರಭೇದಭಾಷೆಗಳು ಹುಟ್ಟಿಕೊಳ್ಳಲು ಕಾರಣವಾದವು. ಪ್ರಾದೇಶಿಕವಾಗಿ ತುಂಗಭದ್ರಾನದಿಯ ಉತ್ತರಭಾಗದ ಪ್ರದೇಶಗಳಲ್ಲಿ ಬಳಕೆಯಲ್ಲಿರುವ ಕನ್ನಡ ಭಾಷೆಯನ್ನು ಉತ್ತರ ಕರ್ನಾಟಕದ ಕನ್ನಡವೆಂದು ದಕ್ಷಿಣ ಭಾಗದ ಪ್ರದೇಶಗಳಲ್ಲಿ ಬಳಕೆಯಲ್ಲಿರುವ ಕನ್ನಡ ಭಾಷೆಯನ್ನು ದಕ್ಷಿಣ ಕರ್ನಾಟಕದ ಕನ್ನಡವೆಂದು ಸ್ಥೂಲವಾಗಿ ಎರಡು ವಿಭಾಗವಾಗಿ ವಿಂಗಡಿಸಬಹುದು. ಅನಂತರ ಕರಾವಳಿ ಭಾಗದ ಕನ್ನಡ ಭಾಷೆಯು ದಕ್ಷಿಣ ಕರ್ನಾಟಕದ ಕನ್ನಡಕ್ಕಿಂತ ಭಿನ್ನವಾಗಿ ತೋರುವುದರಿಂದ ಅದನ್ನು ಪ್ರತ್ಯೇಕಿಸಿ ಹೇಳಬಹುದಾಗಿದೆ. ಹಾಗೆಯೆ ಉತ್ತರಕರ್ನಾಟಕದ ಕನ್ನಡ ಭಾಷೆಯಲ್ಲಿ ಹೈದ್ರಾಬಾದ ಕರ್ನಾಟಕದ ಪ್ರದೇಶದ ಭಾಷೆ ಉಳಿದ ಭಾಗದಲ್ಲಿ ಬಳಕೆಯಲ್ಲಿರುವ ಕನ್ನಡಕ್ಕಿಂತ ಭಿನ್ನವಾಗಿ ತೋರುವುದರಿಂದ ಅದನ್ನು ಬೇರೆಯಾಗಿ ಹೇಳಬಹುದು. ಬಳ್ಳಾರಿ ಜಿಲ್ಲೆಯ ದಕ್ಷಿಣದ ಕೆಲವು ಭಾಗಗಳು ದಕ್ಷಿಣ ಕರ್ನಾಟಕದ ಭಾಷೆಯನ್ನು ಹೋಲುತ್ತವೆ. ಹೀಗೆಯೆ ಕರ್ನಾಟಕದ ಕೆಲವು ಪ್ರದೇಶಗಳಲ್ಲಿ ಸಮ್ಮಿಶ್ರ ಕನ್ನಡ ಬಳಕೆಯಲ್ಲಿದೆ. ಆದ್ದರಿಂದ ಬಹಳ ನಿಖರವಾಗಿ ಕನ್ನಡದ ಪ್ರಾದೇಶಿಕ ಉಪಭಾಷೆಗಳ ಬಳಕೆಯ ಪ್ರದೇಶವನ್ನು ಗುರುತಿಸುವುದು ಸುಲಭವಲ್ಲ. ಕನ್ನಡದ ಸಮಗ್ರ ಉಪಭಾಷಾ ಹಾಗೂ ಪ್ರಭೇದಭಾಷಾ ಪರಿವೀಕ್ಷಣೆ ಇನ್ನೂ ನಡೆದಿರುವುದಿಲ್ಲ. ಸದ್ಯದ ಮಟ್ಟಿಗೆ ಕನ್ನಡ ಪ್ರಾದೇಶಿಕ ಉಪಭಾಷೆಗಳನ್ನು ವಿದ್ವಾಂಸರು ಹೀಗೆ ಗುರುತಿಸಿದ್ದಾರೆ.

### ಧಾರವಾಡ ಕನ್ನಡ

ಧಾರವಾಡ, ಬೆಳಗಾವಿ, ವಿಜಾಪುರ, ಹಾಗೂ ಉತ್ತರ ಕನ್ನಡ ಜಿಲ್ಲೆಯ ಹಾಗೂ ಬಳ್ಳಾರಿ ಜಿಲ್ಲೆಯ ಪ್ರದೇಶಗಳು.

### ಮೈಸೂರು ಕನ್ನಡ

ಮೈಸೂರು, ಮಂಡ್ಯ, ಬೆಂಗಳೂರು, ಕೋಲಾರ, ತುಮಕೂರು, ಹಾಸನ, ಚಿತ್ರದುರ್ಗ, ಶಿವಮೊಗ್ಗ ಜಿಲ್ಲೆ ಮತ್ತು ಚಿಕ್ಕಮಗಳೂರು ಜಿಲ್ಲೆಯ ಕೆಲವು ಪ್ರದೇಶಗಳು.

**ಮಂಗಳೂರು ಕನ್ನಡ**

ಮಂಗಳೂರು, ಮಡಿಕೇರಿ ಜಿಲ್ಲೆಗಳು ಹಾಗೂ ಕಾರವಾರ, ಚಿಕ್ಕಮಗಳೂರು ಜಿಲ್ಲೆಯ ಕೆಲವು ಪ್ರದೇಶಗಳು.

**ಕಲಬುರ್ಗಿ ಕನ್ನಡ**

ಬೀದರ, ಕಲಬುರ್ಗಿ, ರಾಯಚೂರು, ಜಿಲ್ಲೆಗಳ ಪ್ರದೇಶಗಳು ಹಾಗೂ ವಿಜಾಪುರ ಜಿಲ್ಲೆಯ ಉತ್ತರ-ಪಶ್ಚಿಮದ ಕೆಲವು ಭಾಗಗಳು.

## ೫. ಕನ್ನಡ ಭಾಷಾಪ್ರಭೇದಗಳ ನಿರ್ಮಾಣ ಕಾರಣಗಳು

೫.೦ ನಿರಂತರವಾಗಿ ಬೆಳವಣಿಗೆಯ ಲಕ್ಷಣಗಳನ್ನು ತೋರುವ ಯಾವುದೇ ಜೀವಂತ ಭಾಷೆ ಸದಾಕಾಲವು ಒಂದೇ ತೆರನಾಗಿರುವುದು ಅಸಾಧ್ಯ. ಭಾಷೆ ತನ್ನ ಶಿಷ್ಟತೆಯನ್ನು ಕಾಯ್ದುಕೊಂಡರೂ ತನ್ನ ರಚನೆಯ ಚೌಕಟ್ಟಿನೊಳಗೇ ಅದು ಬೆಳವಣಿಗೆ ಹೊಂದುವುದು. ಒಂದು ಭಾಷೆಯ ಬೆಳವಣಿಗೆಯ ಇತಿಹಾಸವು ಆ ಭಾಷೆ ಬಳಕೆಯಲ್ಲಿರುವ ಪ್ರದೇಶದ ವೈಶಾಲ್ಯ, ರಾಜಕೀಯ - ಸಾಮಾಜಿಕ ಸ್ಥಿತ್ಯಂತರಗಳು ಹಾಗೂ ಅನ್ಯಭಾಷೆಗಳ ಸಂಪರ್ಕ ಮುಂತಾದ ಹಲವು ಬಾಹ್ಯ ಅಂಶಗಳ ಮೇಲೆ ಸಾಮಾನ್ಯವಾಗಿ ನಿಂತಿರುತ್ತದೆ. ಈ ಅಂಶಗಳು ಭಾಷೆಯಲ್ಲಿ ಉಪಭಾಷೆಗಳನ್ನೂ ಭಾಷಾ ಪ್ರಭೇದಗಳನ್ನೂ ಉಂಟುಮಾಡುತ್ತವೆ. ಭಾಷೆ ಬೆಳೆಯುತ್ತಾ ಸಾಗಿದಂತೆ ಆಂತರಿಕವಾಗಿ ಅನೇಕ ಬದಲಾವಣೆಗಳು ನಡೆದೇ ಇರುತ್ತವೆ. ಒಂದು ಭಾಷೆಯ ಅಂತಹ ಭಾಷಿಕ ಬದಲಾವಣೆಗಳ ವೈವಿಧ್ಯವನ್ನು ಹಾಗೂ ತಂತ್ರಗಳನ್ನು ವ್ಯವಸ್ಥಿತವಾಗಿ ಐತಿಹಾಸಿಕ ಭಾಷಾವಿಜ್ಞಾನ ವಿವರಿಸುತ್ತದೆ.

ಭೌಗೋಲಿಕವಾಗಿ, ರಾಜಕೀಯವಾಗಿ ತಾಲೂಕು ಮಟ್ಟದವರೆಗಿನ ಘಟಕ ಸಾಮಾನ್ಯವಾಗಿ ಬಹಳ ಬದಲಾವಣೆಗೆ ಒಳಪಡುವುದು ಕ್ವಚಿತ್ತಾದ್ದರಿಂದ ತಾಲೂಕು ಮಟ್ಟದವರೆಗಂತೂ ಪ್ರಭೇದಭಾಷೆ ಅಸ್ತಿತ್ವದಲ್ಲಿರುವುದು ಸಹಜ. ಜಿಲ್ಲಾ ಸ್ಥಳ ಇಂತಹ ಹಲವು ತಾಲೂಕು ಪ್ರಭೇದಗಳ ಪ್ರತಿನಿಧಿಯಾಗಿ ನಿಲ್ಲುವುದು. ಜಿಲ್ಲಾ ಪ್ರದೇಶ ವಿಶಾಲವಾಗಿದ್ದರೆ ಭೌಗೋಲಿಕ ಅಡೆತಡೆಗಳು ಹಾಗೂ ಜಿಲ್ಲಾ ಗಡಿ ಪ್ರದೇಶದ ಸುತ್ತಲೂ ಇರಬಹುದಾದ ಇತರ ಭಾಷೆಗಳ ಪ್ರಭಾವ ಮುಂತಾದ ಕಾರಣಗಳಿಂದ ಒಂದು ಜಿಲ್ಲೆಯ ತುಂಬ ಬಳಕೆಯಲ್ಲಿರುವ ಭಾಷೆ, ಪ್ರಭೇದಭಾಷೆಯ ಘಟ್ಟವನ್ನು ದಾಟಿ ಆ ಜಿಲ್ಲೆಯಲ್ಲಿಯೇ ಉಪಭಾಷೆಯಾಗಿಯೂ ನಿಲ್ಲಬಹುದಾಗಿದೆ.

ಒಂದೊಂದು ಜಿಲ್ಲೆಯ ಘಟಕಗಳನ್ನೇ ಭಾಷಾಪ್ರಭೇದದ ಘಟಕವೆಂದು ಸಧ್ಯದ ಮಟ್ಟಿಗೆ ಗ್ರಹಿಸಿಕೊಂಡು, ಕನ್ನಡ ಭಾಷಾಪ್ರಭೇದಗಳುಂಟಾಗುವಲ್ಲಿ ಭೌಗೋಲಿಕ, ಸಾಮಾಜಿಕ, ರಾಜಕೀಯ ಹಾಗೂ ಅನ್ಯಭಾಷಾ ಪ್ರಭಾವ ಮುಂತಾದ ಅಂಶಗಳ ಪಾತ್ರ ಎಷ್ಟರಮಟ್ಟಿನದು ಎಂಬುದನ್ನು ಇಲ್ಲಿ ವಿವೇಚಿಸಲಾಗಿದೆ.

### ೫.೧ ಭೌಗೋಲಿಕ

ಭಾಷಾ ಬೆಳವಣಿಗೆಯಲ್ಲಿ ಭೌಗೋಲಿಕತೆ ಮುಖ್ಯವಾದ ಪಾತ್ರವಹಿಸುತ್ತದೆ. ಭಾಷಾ ಬಳಕೆಯ ಪ್ರದೇಶ ಎಷ್ಟೆಷ್ಟು ಹೆಚ್ಚು ವಿಸ್ತಾರವಾಗಿರುತ್ತದೆಯೋ ಅಷ್ಟಷ್ಟು ಭಾಷಾಭಿನ್ನತೆಗಳು ಹೆಚ್ಚುತ್ತ ಹೋಗುತ್ತವೆ. ಇದಕ್ಕೆ ಮೂಲಕಾರಣವೆಂದರೆ ಭೌಗೋಲಿಕ ಪರಿಸರ. ಜನರ ಸಂಪರ್ಕ ಸಾಧನಗಳು ಹೆಚ್ಚಿದಷ್ಟು

ಭೌಗೋಲಿಕ ಅಡೆತಡೆಗಳು ಕಡಿಮೆಯಾಗಿ ಭಾಷೆಯಲ್ಲೂ ಶಿಷ್ಟತೆಯ ಹೊಂದಾಣಿಕೆ ಆರಂಭ-ವಾಗುತ್ತದೆ. ಭಾಷಾಪ್ರಭೇದಗಳನ್ನು ಉಂಟುಮಾಡಲು ಕಾರಣವಾಗುವ ಪ್ರಮುಖ ಭೌಗೋಲಿಕ ಅಂಶಗಳೆಂದರೆ ೧. ಗುಡ್ಡ - ಬೆಟ್ಟ - ಪರ್ವತಗಳು ೨. ನದಿಗಳು ೩. ಮರುಭೂಮಿ.

ಕರ್ನಾಟಕದಲ್ಲಿ ಮರುಭೂಮಿ ಪ್ರದೇಶವಿಲ್ಲದುದರಿಂದ ಮೊದಲಿನ ಎರಡನ್ನು ಗಮನಿಸಬಹುದು. ಪರ್ವತಗಳು, ನದಿಗಳು ಜನಸಂಪರ್ಕವನ್ನು ಕಡಿಮೆಗೊಳಿಸುವುದರಿಂದ ಅವುಗಳ ಬದಿಗಳಲ್ಲಿ ವಾಸಿಸುವ ಜನರ ಭಾಷೆಯಲ್ಲಿ ಸ್ಥಳೀಯವಾಗಿ ಬೆಳೆಯುವ ಪ್ರಭೇದಗಳ ಪ್ರಸಾರಕ್ಕೆ ತಡೆಯುಂಟಾಗು-ತ್ತದೆ. ಆದರೆ ಆಧುನಿಕ ಕಾಲದಲ್ಲಿ ಹೆಚ್ಚುತ್ತಿರುವ ಸಂಪರ್ಕ-ಸಾಧನಗಳಿಂದಾಗಿ ನದಿ-ಪರ್ವತಗಳು ಈ ವಿಷಯದಲ್ಲಿ ಗೌಣವೆನಿಸುತ್ತದೆ. ಕರ್ನಾಟಕದ ಕರಾವಳಿ ಪ್ರದೇಶದುದ್ದಕ್ಕೂ ಹೊಂದಿಕೊಂಡು ಹಬ್ಬಿರುವ ಪಶ್ಚಿಮ ಘಟ್ಟಗಳು ಉನ್ನತ ಗಿರಿ-ಶಿಖರಗಳಿಂದ, ಕಾಡುಪ್ರಾಣಿಗಳಿಂದ ತುಂಬಿದ ಹಚ್ಚ-ಹಸುರು ದಟ್ಟಡವಿಗಳಿಂದ, ಕಡಿದಾದ ಕೊಳ್ಳಗಳಿಂದ ಒಡಗೂಡಿವೆ. ನೀಲಗಿರಿ, ಕೊಡಚಾದ್ರಿ, ಬ್ರಹ್ಮ-ಗಿರಿ, ಕುದುರೆಮುಖ, ಬಾಬಾಬುಡನಗಿರಿ, ಮುಂತಾದ ಬೆಟ್ಟಗಳ ಸಾಲು ದಕ್ಷಿಣ ಕರಾವಳಿಯಲ್ಲಿ ಹೆಚ್ಚಿವೆ. ಉತ್ತರಕನ್ನಡ, ದಕ್ಷಿಣಕನ್ನಡ ಹಾಗೂ ಕೊಡಗು ಜಿಲ್ಲೆಗಳಲ್ಲಿ ಇವು ಸಂಪೂರ್ಣ ಆವರಿಸಿದ್ದು: ಶಿವಮೊಗ್ಗ, ಚಿಕ್ಕಮಗಳೂರು, ಹಾಸನ, ಮೈಸೂರು, ಜಿಲ್ಲೆಗಳ ಕೆಲವು ಭಾಗಗಳಲ್ಲಿ ಪರ್ವತ ಶಾಖೆಗಳು ಪಸರಿಸಿವೆ. ಈ ಬೆಟ್ಟದ ಸಾಲುಗಳು ಕರಾವಳಿ ಕನ್ನಡ ಹಾಗೂ ಮಲೆನಾಡು ಕನ್ನಡ ಇವುಗಳಲ್ಲಿ ಭಿನ್ನತೆ-ಯನ್ನುಂಟುಮಾಡಿವೆ. ಈ ಭಾಗದಲ್ಲಿ ಹರಿಯುವ ನದಿಗಳೂ ದುರ್ಗಮಕೊಳ್ಳಗಳು ಸ್ಥಳೀಯ ಭಾಷಾ-ಪ್ರಭೇದಗಳು ಈಗಲೂ ಉಳಿಯುವಂತೆ ಮಾಡಿವೆ. ಕರಾವಳಿ ಪ್ರದೇಶದ ಕನ್ನಡದ ಮೇಲೆ ಕೊಂಕಣಿ, ತುಳು ಹಾಗೂ ಮಲೆಯಾಳಂ ಭಾಷೆಗಳ ಪ್ರಭಾವವನ್ನು ಸಾಮಾನ್ಯವಾಗಿ ಕಾಣಬಹುದಾದರೂ ದಕ್ಷಿಣ ಕನ್ನಡ ಜಿಲ್ಲೆಯ ದಕ್ಷಿಣ ಭಾಗದಲ್ಲಿ ತುಳು-ಮಲೆಯಾಳಂ ಪ್ರಭಾವ ಬಹುಮಟ್ಟಿಗೆ ಇದೆ. ಉತ್ತರ ಭಾಗದಲ್ಲಿ ಇವುಗಳ ಪ್ರಭಾವ ಕಡಿಮೆ. ಉತ್ತರ ಕನ್ನಡ ಜಿಲ್ಲೆಯಲ್ಲಿ ಕೊಂಕಣಿ, ಮರಾಠಿ ಭಾಷೆಗಳ ಪ್ರಭಾವ ಹೆಚ್ಚಿಗಿದೆ. ಕರಾವಳಿ ಕನ್ನಡ ಪ್ರದೇಶಗಳಲ್ಲಿ ಮಧ್ಯಸ್ವರ ಉಚ್ಚಸ್ವರ ಆಗಿಲ್ಲ. ಅಂದರೆ ಎ > ಇ, ಒ > ಉ ಪರಿವರ್ತನೆ ನಡೆದಿಲ್ಲ. ಸರ್ವನಾಮಗಳಲ್ಲಿಯ ಸಮಾವೇಶಕ-ಅಸಮಾವೇಶಕ ವ್ಯತ್ಯಾಸ ಈಗಲೂ ಇದೆ. ಇಂತಹ ಅನೇಕ ವೈಶಿಷ್ಟ್ಯಗಳು ಕರಾವಳಿ ಪ್ರಭೇದಗಳನ್ನು ಇತರ ಪ್ರಭೇದಗಳಿಗಿಂತ ಭಿನ್ನವಾಗಿರಿಸಿವೆ.

ಕರಾವಳಿ ಪ್ರದೇಶದಲ್ಲಿಯ ಕನ್ನಡಪ್ರಭೇದಗಳು ಲೆಕ್ಕವಿಲ್ಲದಷ್ಟು. ಸಾಮಾಜಿಕವಾಗಿ ಇಲ್ಲಿ ಒಂದೊಂದು ವಿಶಿಷ್ಟ ಜನಾಂಗದವರಿಗೂ ಒಂದೊಂದು ಪ್ರಭೇದ ಅಥವಾ ಉಪಭಾಷೆ. ಅಷ್ಟೇ ಏಕೆ ಒಂದೊಂದು ಹಳ್ಳಿಗೂ ಒಂದೊಂದು ಪ್ರಭೇದ ಕಂಡರೂ ಆಶ್ಚರ್ಯವಿಲ್ಲ. "ಅಂತೂ ಭಾಷೆಯ ಮಟ್ಟಿಗೆ ದಕ್ಷಿಣ ಕನ್ನಡ ಒಂದು ವಿವಿಧ ವಸ್ತು ಪ್ರದರ್ಶನ ಶಾಲೆಯಂತಿದೆ (Museum) ಅಥವಾ ಮೃಗಶಾಲೆಯಂತಿದೆ (Zoo)" ಎಂಬ ಎಂ. ಮರಿಯಪ್ಪ ಭಟ್ಟರ ಮಾತನ್ನಿಲ್ಲಿ ಸ್ಮರಿಸಬಹುದು. ದಕ್ಷಿಣ ಕನ್ನಡ ಹಾಗೂ ಉತ್ತರ ಕನ್ನಡ ಜಿಲ್ಲೆಗಳಲ್ಲಿ ಒಂದೊಂದು ಹಳ್ಳಿ ತೀರ ಚಿಕ್ಕವು ಆಗಿರುವುದಲ್ಲದೆ ದೂರದೂರದಲ್ಲಿ ನೆಲಸಿರುವುದರಿಂದ ಬಾಹ್ಯ ಜಗತ್ತಿನೊಂದಿಗೆ ಕಡಿಮೆ ಸಂಪರ್ಕ ಹೊಂದಿರುವುದರಿಂದ ಅವು ತಮ್ಮದೇ ಪ್ರಭೇದಗಳನ್ನು ಬೆಳಸಿಕೊಳ್ಳುತ್ತವೆ. ತಾಲೂಕು ಹಾಗೂ ಜಿಲ್ಲಾ ಸ್ಥಳಗಳಲ್ಲಿ ಕೆಲವುಸಲ ಶಿಷ್ಟಭಾಷೆ ವ್ಯಾವಹಾರಿಕ ಕನ್ನಡವಾಗಿ ಬಳಸಲ್ಪಡುತ್ತದೆ. ಶಿವಮೊಗ್ಗ ಜಿಲ್ಲೆಯ ಪಶ್ಚಿಮ ಭಾಗಗಳಲ್ಲಿ ಮಲೆನಾಡು ಆವರಿಸಿದೆ. ಆದರೆ ಉತ್ತರಕನ್ನಡ ಜಿಲ್ಲೆಯ ಭಾಷೆಯಂತೆ ಶಿವಮೊಗ್ಗ ಜಿಲ್ಲೆಯ ಭಾಷೆ ಅಲ್ಲ. ಕೊಡಚಾದ್ರಿ ಇವೆರಡರ ಮಧ್ಯ ಗೋಡೆಯಾಗಿ ನಿಂತಿದೆ.

ಪಶ್ಚಿಮ ಘಟ್ಟಗಳನ್ನು ಬಿಟ್ಟರೆ ಅಷ್ಟೇನೂ ದಟ್ಟವಲ್ಲದ ಮೈಸೂರು, ಬಳ್ಳಾರಿ, ಚಿತ್ರದುರ್ಗ, ತುಮಕೂರು ಜಿಲ್ಲೆಗಳಲ್ಲಿ ಹಬ್ಬಿರುವ ಪೂರ್ವಘಟ್ಟಗಳನ್ನು ಗಮನಿಸಬೇಕು. ಪೂರ್ವಘಟ್ಟಗಳು ಬಿಡಿಬಿಡಿಯಾಗಿರುವುದರಿಂದಲೂ ಅಷ್ಟು ದುರ್ಗಮವಾಗಿರುವುದಿಲ್ಲವಾದ್ದರಿಂದಲೂ ಪಶ್ಚಿಮಘಟ್ಟಗಳಂತೆ ಪ್ರಭೇದವನ್ನುಂಟುಮಾಡುವಲ್ಲಿ ಇವುಗಳ ಪಾತ್ರ ಗೌಣ.

ಬಳ್ಳಾರಿ ಜಿಲ್ಲೆಯಲ್ಲಿ ಸೊಂಡೂರಿನ ಬೆಟ್ಟಗಳು ಜಿಲ್ಲೆಯ ತಾಲೂಕಗಳನ್ನು ಪ್ರತ್ಯೇಕಿಸಿ ಪ್ರಭೇದಗಳನ್ನುಂಟುಮಾಡಿವೆ. ಹೊಸಪೇಟೆ, ಶಿರಗುಪ್ಪ, ಸಿಂಧನೂರು. ಬಳ್ಳಾರಿ, ಸೊಂಡೂರು ತಾಲೂಕುಗಳು ಒಂದೆಡೆಗೆ ನಿಂತರೆ ಹಡಗಲಿ, ಕೂಡ್ಲಿಗಿ, ಹರಪನಹಳ್ಳಿ, ತಾಲೂಕುಗಳು ಮತ್ತೊಂದೆಡೆ ನಿಲ್ಲುತ್ತವೆ. ತುಮಕೂರು ಜಿಲ್ಲೆಯಲ್ಲಿಯ ಬೆಟ್ಟಗಳು ಚಿಕ್ಕವಾಗಿರುವುದರಿಂದ ಭಾಷಾಪ್ರಭೇದಗಳಿಗೆ ಪೋಷಕಕವೆನಿಸುವುದಿಲ್ಲ. ದೇವರಾಯನದುರ್ಗ, ಮಧುಗಿರಿದುರ್ಗ, ಮುಂತಾದ ಬೆಟ್ಟಗಳು ಜಿಲ್ಲೆಯ ದಕ್ಷಿಣ ಭಾಗದಲ್ಲಿ ದಕ್ಷಿಣ-ಪೂರ್ವದಿಕ್ಕಿಗೆ ಹಬ್ಬಿನಿಂತಿವೆ. ಜಿಲ್ಲೆಯ ಇತರ ತಾಲೂಕುಗಳಲ್ಲಿಯೂ ಚಿಕ್ಕಚಿಕ್ಕ ಬೆಟ್ಟಗಳಿವೆ. ಚಿತ್ರದುರ್ಗ ಜಿಲ್ಲೆಯಲ್ಲಿಯೂ ಪೂರ್ವಘಟ್ಟದ ಅನೇಕ ಸಾಲುಗಳು ಹಬ್ಬಿನಿಂತಿವೆ. ಬಿಳಿಗಿರಿರಂಗನ ಬೆಟ್ಟದ ಸಾಲು ಪ್ರಮುಖವಾದವು.

ಭಾಷಾ ಪ್ರಭೇದಗಳನ್ನುಂಟುಮಾಡುವಲ್ಲಿ ನದಿಗಳೂ ಮುಖ್ಯ ಪಾತ್ರವಹಿಸುತ್ತವೆ. ಕೃಷ್ಣಾ, ತುಂಗಭದ್ರಾ, ಕಾವೇರಿ, ಭೀಮಾ, ಮಲಪ್ರಭಾ, ಘಟಪ್ರಭಾ, ಹೇಮಾವತಿ, ನೇತ್ರಾವತಿ ಮುಂತಾದ ನದಿಗಳು ಅವು ಹರಿಯುವ ಎರಡೂ ಬದಿಗೆ ಪ್ರಭೇದಗಳನ್ನು ಉಂಟುಮಾಡಿವೆ.

ಜಿಲ್ಲೆ ತಾಲೂಕುಗಳ ಗಡಿಪ್ರದೇಶ ಎಷ್ಟೋ ಸಲ ನದಿಗಳಿಗೆ ಹೊಂದಿ ಇರುವುದರಿಂದ ಪ್ರಭೇದಗಳು ಇನ್ನೂ ಹೆಚ್ಚು ಗಟ್ಟಿಗೊಳ್ಳುತ್ತವೆ. ಉದಾಹರಣೆಗೆ : ಕೃಷ್ಣಾ, ತುಂಗಭದ್ರಾ ನದಿಗಳ ಮಧ್ಯದಲ್ಲಿರುವ ರಾಯಚೂರು ಜಿಲ್ಲೆಯ ಭಾಷೆ ಒಂದು ಪ್ರಭೇದವಾಗಿರುವುದನ್ನಿಲ್ಲಿ ಗಮನಿಸಬಹುದು.

ಶಿವಮೊಗ್ಗ ಜಿಲ್ಲೆಯಲ್ಲಿ ತುಂಗಭದ್ರಾ ನದಿಯು ಭದ್ರಾವತಿ, ಚನ್ನಗಿರಿ ತಾಲೂಕುಗಳನ್ನು ಜಿಲ್ಲೆಯ ಇತರ ತಾಲೂಕುಗಳಿಂದ ಪ್ರತ್ಯೇಕಿಸಿದೆ. ವಿಜಾಪುರ, ಧಾರವಾಡ ಜಿಲ್ಲೆಗಳ ಗಡಿಯಲ್ಲಿ ಸುಮಾರು ೨೦ ಮೈಲುಗಳವರೆಗೆ ಹರಿಯುವ ಮಲಪ್ರಭಾ ನದಿ ಅವೆರಡೂ ಜಿಲ್ಲೆಗಳ ಪ್ರಭೇದಗಳನ್ನು ಪ್ರತ್ಯೇಕಿಸುವಲ್ಲಿ ಪಾತ್ರವಹಿಸಿದೆಯನ್ನಬಹುದು. ಕಲಬುರ್ಗಿ ಜಿಲ್ಲೆಯಲ್ಲಿ ಭೀಮಾ ನದಿಯ ದಕ್ಷಿಣ-ಉತ್ತರ ಕಡೆಗಳಲ್ಲಿ ಪ್ರಭೇದಗಳನ್ನು ನಿರ್ಮಿಸಿದೆ. ಬಳ್ಳಾರಿ ಜಿಲ್ಲೆಯಲ್ಲಿ ತುಂಗಭದ್ರಾ ನದಿ ರಾಯಚೂರು ಹಾಗೂ ಬಳ್ಳಾರಿ ಭಾಷೆಯನ್ನು ಭಿನ್ನವಾಗಿಸಿದೆ. ಅದೇ ನದಿ ಧಾರವಾಡ ಹಾಗೂ ಬಳ್ಳಾರಿ ಭಾಷೆಗಳನ್ನೂ ಪ್ರತ್ಯೇಕವಾಗಿರಿಸಿದೆ. ಒಟ್ಟಿನಲ್ಲಿ ಭೀಮಾ, ಕೃಷ್ಣಾ, ಮಲಪ್ರಭಾ, ತುಂಗಭದ್ರಾ, ಕಾವೇರಿ ಮುಂತಾದ ಮುಖ್ಯ ನದಿಗಳು ತಕ್ಕಮಟ್ಟಿಗಾದರೂ ಪ್ರಭೇದಗಳಾಗುವಲ್ಲಿ ಸಹಾಯಕಾರಿಯಾಗಿವೆ. ಅನೇಕ ನದಿಗಳಿಗೆ ಈಗ ಸೇತುವೆಗಳಾಗಿ ಸಂಪರ್ಕಸಾಧನಗಳ ಅನುಕೂಲತೆ ಉಂಟಾಗಿರುವುದರಿಂದ ಇವುಗಳ ಪಾತ್ರ ಈಗ ಕಡಿಮೆಯಾಗುತ್ತಿದೆ.

ಭೌಗೋಲಿಕ ಅಡೆತಡೆಗಳು (ಭಾಷಾಪ್ರಭೇದಗಳಾಗುವಲ್ಲಿ ಪ್ರಮುಖ ಅಂಶಗಳಾಗಿದ್ದರೂ) ಇಂದಿನ ವೈಜ್ಞಾನಿಕ ಯುಗದಲ್ಲಿ ಅಡೆ-ತಡೆಗಳೇ ಎನಿಸುತ್ತಿಲ್ಲ. ಇದಕ್ಕೆ ಪೂರಕವಾಗಿ ರೇಡಿಯೋ, ಚಲನಚಿತ್ರ, ವೃತ್ತಪತ್ರಿಕೆಗಳು, ಗಣಕಯಂತ್ರಗಳು ಶಿಕ್ಷಣ ಪ್ರಸಾರ ಮುಂತಾದವುಗಳೂ ಭಾಷೆಯ ಪ್ರಭೇದಗಳ ಗೋಡೆಯನ್ನು ಮುರಿದು ಶಿಷ್ಟಭಾಷೆಯಲ್ಲಿ ಲೀನಗೊಳಿಸತೊಡಗಿವೆ. ಆದರೆ ಇನ್ನೂ ಕೆಲವು ಹಳ್ಳಿಗಳ ಪ್ರದೇಶದಲ್ಲಿ ಪ್ರಭೇದಗಳಿಗೆ ಧಕ್ಕೆಯುಂಟಾಗಿಲ್ಲ. ಅದಕ್ಕೆ ಕಾರಣವೆಂದರೆ ಪ್ರಾಂತೀಯತೆ (Provinciation) ವೈಯಕ್ತಿಕತೆ (Individualism) ಹಾಗೂ ಪ್ರತಿಷ್ಠೆ (Prestige) ಅಂಶಗಳು.

## ೫.೨ ಸಾಮಾಜಿಕ

ಭೌಗೋಲಿಕ ಅಂಶಗಳಲ್ಲದೆ ಸಾಮಾಜಿಕ ಅಂಶಗಳೂ ಭಾಷಾಪ್ರಭೇದಗಳಾಗುವಲ್ಲಿ ಪ್ರಮುಖ ಕಾರಣಗಳಾಗುತ್ತವೆ. ಅಂತೆಯೇ ಅಂತಸ್ತು, ಜಾತಿ, ವಿದ್ಯೆ ಮುಂತಾದ ಸಾಮಾಜಿಕ ಅಂಶಗಳ ಆಧಾರಗಳ ಮೇಲೆಯೂ ಪ್ರಭೇದಗಳನ್ನು ಗುರುತಿಸುವ ಪದ್ದತಿಗಳಿವೆ. ಮನುಷ್ಯ ಸಮಾಜಜೀವಿಯಾದ್ದರಿಂದ ತಾನು ಯಾವ ಸಮಾಜದ ಪರಿಸರದಲ್ಲಿ ಇರುವನೋ, ಅಂಥ ಸಾಮಾಜಿಕ ಪರಿಸರದ ಭಾಷೆಯನ್ನೇ ಅವನು ಅಳವಡಿಸಿಕೊಳ್ಳುತ್ತಾನೆ.

ಜಾತಿ ಅಥವಾ ಜನಾಂಗದ ಆಧಾರದ ಮೇಲೆ ಪ್ರಭೇದಗಳನ್ನಷ್ಟೇ ಏಕೆ ಉಪಭಾಷೆಗಳನ್ನೂ ಸೂಚಿಸುವ ವಾಡಿಕೆ ಇದೆ. ಒಂದು ಜಾತಿಯ ಜನರಲ್ಲಿ ದೇಹ ಸಂಬಂಧ ಹಾಗೂ ಇನ್ನಿತರ ವ್ಯವಹಾರ ಹೆಚ್ಚು ನಡೆಯುವುದರಿಂದ ಅವರ ನಡುವೆ ಭಾಷಾಸಂಪರ್ಕ ಒಂದೇ ತೆರನಾಗಿರುತ್ತದೆ. ಒಂದು ಜಾತಿಯವರ ಜನಸಂಖ್ಯೆ ಕಡಿಮೆ ಇರಲಿ ಹೆಚ್ಚಿರಲಿ ಅವರ ಆಚಾರ-ವಿಚಾರ, ನಡೆ-ನುಡಿ, ಇತ್ಯಾದಿ ಸಾಂಸ್ಕೃತಿಕ ಅಂಶಗಳಿಗೆ ಸಂಬಂಧಿಸಿದ ಅವರದೇ ಆದ ಭಾಷೆ ರೂಪಿತವಾಗಿರುತ್ತದೆ. ಆದರೆ ವಿಶಾಲವಾದ ಪ್ರದೇಶಗಳಲ್ಲಿ ಒಂದೇ ಜಾತಿಯ ಜನರು ವಾಸಿಸುತ್ತಿದ್ದರೆ ಅವರ ಭಾಷೆಯನ್ನು ಜಾತಿ ಮತ್ತು ಧರ್ಮದ ಆಧಾರದ ಮೇಲೆ ಗುರುತಿಸುವುದಾದರೆ ೧. ವೀರಶೈವರ ಕನ್ನಡ ೨. ಬ್ರಾಹ್ಮಣರ ಕನ್ನಡ ೩. ಇತರ ಧರ್ಮೀಯರ ಕನ್ನಡ ಎಂದು ಸ್ಥೂಲವಾಗಿ ಗುರುತಿಸಬಹುದು. ಈ ಮೂರು ವರ್ಗದ ಜನರು ಸಮಗ್ರ ಕರ್ನಾಟಕದಲ್ಲಿ ನೆಲಸಿರುವುದರಿಂದ ಅವರವರ ಭಾಷೆಯಲ್ಲಿಯೇ ಪ್ರಭೇದಗಳನ್ನು ಗುರುತಿಸಲು ಸಾಧ್ಯವಿದೆ :

| | | | |
|---|---|---|---|
| ಅ. | ೧. | ಧಾರವಾಡ ವೀರಶೈವರ ಕನ್ನಡ ಪ್ರಭೇದ | (ಧಾ.ವೀ.ಕ) |
| | ೨. | ಕಲಬುರ್ಗಿ ವೀರಶೈವರ ಕನ್ನಡ ಪ್ರಭೇದ | (ಕ.ವೀ.ಕ) |
| | ೩. | ಮೈಸೂರು ವೀರಶೈವರ ಕನ್ನಡ ಪ್ರಭೇದ | (ಮೈ.ವೀ.ಕ) |
| ಆ. | ೧. | ಧಾರವಾಡ ಬ್ರಾಹ್ಮಣರ ಕನ್ನಡ ಪ್ರಭೇದ | (ಧಾ.ಬ್ರಾ.ಕ) |
| | ೨. | ಕಲಬುರ್ಗಿ ಬ್ರಾಹ್ಮಣರ ಕನ್ನಡ ಪ್ರಭೇದ | (ಕ.ಬ್ರಾ.ಕ) |
| | ೩. | ಮೈಸೂರು ಬ್ರಾಹ್ಮಣರ ಕನ್ನಡ ಪ್ರಭೇದ | (ಮೈ.ಬ್ರಾ.ಕ) |
| ಇ. | ೧. | ಧಾರವಾಡ ಇತರ ಧರ್ಮೀಯರ ಕನ್ನಡ ಪ್ರಭೇದ | (ಧಾ.ಇ.ಕ) |
| | ೨. | ಕಲಬುರ್ಗಿ ಇತರ ಧರ್ಮೀಯರ ಕನ್ನಡ ಪ್ರಭೇದ | (ಕ.ಇ.ಕ) |
| | ೩. | ಮೈಸೂರು ಇತರ ಧರ್ಮೀಯರ ಕನ್ನಡ ಪ್ರಭೇದ | (ಮೈ.ಇ.ಕ) |

ಧಾ.ವೀ. ವರ್ಗದವರು ಮೈಸೂರಿನಲ್ಲಿ ನೆಲಸಿದರೆ ಅವರ ಭಾಷೆ ಮೈ.ವೀ.ರ ಭಾಷೆಯಂತೆ ಕ್ರಮೇಣ ಬದಲಾಗಿ ಬಿಡುತ್ತದೆ. ಕ.ವೀ.ಕ ದಲ್ಲಿ 'ಹಾನ' 'ಹಾಳ' ಮುಂತಾದ ಪದಗಳು ಧಾ.ವೀ.ಕ ದಲ್ಲಿ ತಪ್ಪಿ ಕೂಡ ಬರುವುದಿಲ್ಲ. ಇದೇ ರೀತಿ ಧಾ.ಬ್ರಾ.ಕ ಹಾಗೂ ಕ.ಬ್ರಾ.ಕ ಇವುಗಳಲ್ಲಿ ಸ್ಪಷ್ಟ ವ್ಯತ್ಯಾಸ ಗುರುತಿಸಬಹುದು. ಕರಾವಳಿ ಬ್ರಾಹಣರ ಕನ್ನಡದಲ್ಲಂತೂ ಅನೇಕ ಭಿನ್ನತೆಗಳನ್ನು ಕಾಣಬಹುದು. ಧಾ.ಬ್ರಾ.ಕ ಹಾಗೂ ಮೈ.ಬ್ರಾ.ಕ ಇವುಗಳಿಗಿಂತ ಕರಾವಳಿ ಬ್ರಾಹ್ಮಣರ ಕನ್ನಡ ಪ್ರಭೇದ ಭಿನ್ನವಾಗಿರುವುದನ್ನು ಗಮನಿಸಬೇಕು. ಆದ್ದರಿಂದ ಧರ್ಮದೊಡನೆ ಪ್ರದೇಶವೂ ಹೊಯ್‌ಕೈಯಾಗಿ, ಪ್ರಭೇದಗಳ ನಿರ್ಮಾಣ ಕಾರಣಗಳಾಗಿ ನಿಲ್ಲುತ್ತವೆ. ಕೊಡಗು ಜಿಲ್ಲೆಯ ಒಂದೇ ಪ್ರದೇಶದಲ್ಲಿರುವ ಗೌಡಜನಾಂಗದವರು ಮಾತನಾಡುವ ಕನ್ನಡಕ್ಕೂ, ಜೇನು ಕುರುಬರು ಮಾತನಾಡುವ ಕನ್ನಡಕ್ಕೂ ವ್ಯತ್ಯಾಸವಿದೆ. ಹಾಸನ ಜಿಲ್ಲೆಯ ಸಂಕೇತಿ ಬ್ರಾಹ್ಮಣರ ಕನ್ನಡಕ್ಕೂ ಸ್ಥಳೀಯ ಬ್ರಾಹ್ಮಣರ ಕನ್ನಡಕ್ಕೂ ಭಿನ್ನತೆಯುಂಟು. ಕರಾವಳಿ ಪ್ರದೇಶದಲ್ಲಿಯ

ಹವ್ಯಕ, ಒಕ್ಕಲಿಗ, ಹರಕಂತ, ಕೊಮಾರ ಪಂತ, ಬಂಟ, ಮಾಪಿಳ್ಳೆ, ಸೋಲಿಗ ಮೊದಲಾದ ಹಲವಾರು ಜನಾಂಗದವರ ಕನ್ನಡದಲ್ಲಿ ಭಿನ್ನತೆಯನ್ನು ಗಮನಿಸಬಹುದು. ಆದುದರಿಂದ ಕನ್ನಡ ಭಾಷಾಪ್ರಭೇದಗಳ ನಿರ್ಮಾಣ ಕಾರಣಗಳಲ್ಲಿ ಜಾತಿ ಧರ್ಮ ಅಥವಾ ಜನಾಂಗ ಒಂದು ಪ್ರಮುಖ ಸಾಮಾಜಿಕ ಅಂಶವಾಗಿರುವುದನ್ನು ಕಡೆಗಣಿಸಲಾಗದು.

**೫.೩ ಅಂತಸ್ತು**

ಸಾಮಾಜಿಕ ಅಂತಸ್ತು ಕೆಲವುಸಲ ಪ್ರಭೇದಗಳಿಗೆಡೆ ಮಾಡಿಕೊಡುತ್ತದೆ. ಅಂತಸ್ತಿನಲ್ಲಿ ೧. ಉನ್ನತ ೨. ಮಧ್ಯ ೩. ನಿಮ್ನ ಎಂದು ಮೂರು ಬಗೆಯಾಗಿ ವಿಂಗಡಿಸಬಹುದು. ಆರ್ಥಿಕ ಹಾಗೂ ಸಾಮಾಜಿಕವಾಗಿ ಉನ್ನತವರ್ಗದಲ್ಲಿ ಇರುವ ಜನರೆಂದರೆ ವಿದ್ಯಾವಂತರು, ರಾಜಕೀಯ ಮುಖಂಡರು, ಅಧಿಕಾರಿಗಳು, ವಾಣಿಜ್ಯ ಪತಿಗಳು, ಶ್ರೀಮಂತರು ಇತ್ಯಾದಿ. ಈ ವರ್ಗದ ಜನರು ಯಾವ ಜಾತಿಯವರೇ ಇರಲಿ ತಾವು ಪ್ರತಿಷ್ಠಿತರೆಂದು ತೋರಿಸುಕೊಡುವುದಕ್ಕಾಗಿ ಶಿಷ್ಟ ಕನ್ನಡವನ್ನು ಬಳಸುತ್ತಾರೆ. ಇವರು ಹೆಚ್ಚಾಗಿ ಉನ್ನತ ಸಾಮಾಜಿಕ-ಆರ್ಥಿಕ ಸ್ಥಿತಿಯಲ್ಲಿ ಇರುವ ಜನರೊಂದಿಗೆ ಹೆಚ್ಚು ಸಂಪರ್ಕವಿಟ್ಟುಕೊಂಡಿರುವುದರಿಂದ ಅವರದೇ ಆದ ಒಂದು ಪ್ರಭೇದ ಹುಟ್ಟಲು ಕಾರಣವಾಗುತ್ತದೆ.

ಆರ್ಥಿಕವಾಗಿ, ಸಾಮಾಜಿಕವಾಗಿ ಹಿಂದುಳಿದ ಸುಶಿಕ್ಷಿತರಲ್ಲದವರ ಭಾಷೆ ಒಂದು ಪ್ರಭೇದವಾಗಿ ನಿಲ್ಲುತ್ತದೆ. ಹೊಟ್ಟೆಪಾಡಿಗಾಗಿ ದಿನಗೂಲಿಯನ್ನು ಅವಲಂಬಿಸಿರುವ ಕೂಲಿಯಾಳುಗಳು, ಹಮಾಲರು, ಡ್ರೈವರರು, ರಸ್ತೆಯ ಮೇಲೆ ಚಿಕ್ಕ ಪುಟ್ಟ ವ್ಯಾಪಾರ ಮಾಡುವರು ಮುಂತಾದವರು ಮಾತನಾಡುವ ಭಾಷೆ ಇದರಲ್ಲಿ ಒಳಗೊಳ್ಳುತ್ತದೆ. ಶಿಷ್ಟ ಭಾಷೆ ಯಾವುದು, ಅಶಿಷ್ಟ ಭಾಷೆ ಯಾವುದಲ್ಲ ಎಂಬುದರ ಬಗೆಗೆ ತಿಳಿದುಕೊಳ್ಳಲು ಅಥವಾ ಅನುಕರಿಸುವ ಆಸಕ್ತಿಯನ್ನು ಅವರು ತೋರುವುದು ಕ್ವಚಿತ್. ಇವರದು ಹೆಚ್ಚು ವ್ಯಾವಹಾರಿಕವಾದ ಭಾಷೆಯಾದ್ದರಿಂದ ಸನ್ನಿವೇಶ ಸಂದರ್ಭಗಳಿಗೆ ಹೊಂದಿಕೊಂಡು ಹೋಗುತ್ತದೆ. ಉನ್ನತ ಮತ್ತು ನಿಮ್ನ ಈ ಎರಡೂ ಹಂತಗಳ ನಡುವೆ ಮಧ್ಯಮವರ್ಗದವರ ಭಾಷೆ ನಿಲ್ಲುತ್ತದೆ. ಈ ವರ್ಗದ ಜನರು ಮೇಲು ಹಾಗೂ ಕೆಳವರ್ಗಗಳ ಎರಡೂ ಬಗೆಯ ಜನರೊಂದಿಗೆ ಬೆರೆಯುವುದರಿಂದ ಸಂದರ್ಭಕ್ಕೆ ಅನುಗುಣವಾಗಿ ಎರಡೂ ಪ್ರಭೇದಗಳನ್ನು ಇವರು ಬಳಸುತ್ತಾರೆ. ಆದ್ದರಿಂದ ಇವರಾಡುವ ಭಾಷೆ ಪ್ರಭೇದವಾಗಿ ನಿಲ್ಲುವುದು ಸಂದೇಹಾಸ್ಪದವಾಗಿದೆ. ಕಾರಕೂನರು, ಮೇಸ್ತ್ರಿಗಳು, ಸೂಪರವಾಯಿಜರುಗಳು, ಪೋಲೀಸರು, ಗ್ರಾಮೀಣ ಶಿಕ್ಷಕರು ಇತ್ಯಾದಿ ಈ ವರ್ಗಕ್ಕೆ ಸೇರುತ್ತಾರೆ.

ಸಾಮಾಜಿಕ ಅಂತಸ್ತು ಭಾಷೆಯಲ್ಲಿ ಸೂಚಿತವಾಗುತ್ತದೆ. ಉದಾಹರಣೆಗೆ: ದಾಟು ಕಾದಂಬರಿಯಲ್ಲಿ ಬರುವ ಈ ಕೆಳಗಿನ ಒಂದು ಚಿಕ್ಕ ಸಂಭಾಷಣೆಯನ್ನು ಗಮನಿಸಬಹುದು (ಗ್ರಂಥಸ್ಥವಾದರೂ ಆಡುಮಾತಿನ ಪ್ರಕಾರವೆಂದು ಇದನ್ನಿಲ್ಲಿ ಎತ್ತಿಕೊಂಡಿದೆ).

'ಅಷ್ಟರಲ್ಲಿ ನಿಂಗವ್ವ ಬಂದು - ನೀರು ಕಾದವೆ. ತಾನ ಮಾಡಕೆ ಬಲ್ಲಿ' ಎಂದಳು.

'ಇದೇನು ಇಷ್ಟು ಹೊತ್ನಲ್ಲಿ ಸ್ನಾನ ?' ವೆಂಕಟೇಶ ಕೇಳಿದ.

'ಈಗ ದಿನಕ್ಕೆ ಮೂರುಸಲಿ ಮಡಿ ಉಟ್ಕೊಂತೀವಿ. ಇಲ್ದೆ ಇದ್ರೆ ಮನುಸ್ಗೆ ಹ್ಯಾಂಗ ಹ್ಯಾಂಗೊ ಆಯ್ತದೆ. ಸ್ವಾಮಿ ಉಟ್ಕೊವಾಗ, ನೆತ್ತಿಮ್ಯಾಲಿ ಬಂದಾಗ, ಮುಣುಗುವಾಗ ಬಿಸಿಬಿಸಿಯಾಗಿ ಸ್ನಾನ ಮಾಡ್ಕೊಂಡು ಪೂಜಿಗೆ ಕುಂತ್ರೆ ಹಿತವಾಗಿರ್ತದೆ' ಎಂದು ಅವರು ಮೇಲೆ ಎದ್ದರು.

ಇಲ್ಲಿ 'ನಿಂಗವ್ವ' ನಿಮ್ನ ವರ್ಗದ ಪ್ರತಿನಿಧಿ. 'ವೆಂಕಟೇಶ' ಮಧ್ಯಮವರ್ಗದವ. 'ಅವರು' ಅಂದರೆ ತಿರುಮಲೇಗೌಡರು ಹಳ್ಳಿಯ ಹಿರಿಯ ಪಟೇಲರು. ಇದೇ ಪಟೇಲರ ಮಗ ಬಿ.ಎ., ಎಲ್.ಎಲ್.ಬಿ. ಕಲಿತು ಮಂತ್ರಿ ಸ್ಥಾನದಲ್ಲಿದ್ದವನು, ಅವನ ಮಾತಿದು :

"ನಿನ್ನ ಮಾತು ನ್ಯಾಯ, ಪುರಾತನ ಕಾಲದಿಂದ ಬಂದ ದೇವಸ್ಥಾನ ಬೀಳೊ ಸ್ಥಿತಿಯಲ್ಲಿದೆ. ಮುಜರಾಯಿ ಇಲಾಖೆಯೋರು ತಕ್ಷಣ ರಿಪೇರಿ ಮಾಡಿಸ್ದೆ ಇದ್ರೇ ಹಾಳಾಗುತ್ತೆ. ತಕ್ಷಣ ಇದರ ಹಿಂದಿನ ಗೋಡೆ ರಿಪೇರಿ ಮಾಡಿಸಬೇಕು. ಅಂತ ನೀನು ಒಂದು ಅರ್ಜಿ ಬರೆದು ಗ್ರಾಮದ ಹತ್ತು ಜನರ ರುಜು ಹಾಕಿಸಿಕೊಡು, ಮುಜುರಾಯಿ ಮಂತ್ರಿಗಳಿಗೆ ಕೊಡಿಸಿ ನಾನು ಮುಂದಿನ ಕೆಲಸ ಮಾಡುಸ್ತೀನಿ".

ಈ ರೀತಿಯ ಸಾಮಾಜಿಕ ಪ್ರಭೇದಗಳಲ್ಲದೆ ಇನ್ನೂ ಒಂದಿದೆ : ಅದು ಬೇರೆ ರಾಜ್ಯಗಳಿಂದ ವ್ಯಾಪಾರ-ಉದ್ಯೋಗ-ನವಕರಿ ಮುಂತಾದ ಉದ್ದೇಶಗಳಿಗಾಗಿ ಇಲ್ಲಿಗೆ ಬಂದು ನೆಲಸಿದ ಅನ್ಯಪ್ರಾಂತಿಯರ ಕನ್ನಡ. ಗುಜರಾತ, ಮುಂಬೈ, ಮುಂತಾದೆಡೆಗಳಿಂದ ಬಂದ ಮಾರವಾಡಿಗಳು, ಮರಾಠಿಗರು, ತಮಿಳುನಾಡು, ಆಂಧ್ರ ಪ್ರದೇಶಗಳಿಂದ ಬಂದ ತಮಿಳು-ತೆಲುಗರು. ಕೊಂಕಣದಿಂದ ಬಂದ ಕೊಂಕಣಿಗರು. ಕೇರಳದಿಂದ ಬಂದ ಮಲೆಯಾಳಿಗರು. ಇಂಥವರ ಸಂಖ್ಯೆ ಮುಖ್ಯಪಟ್ಟಣಗಳಲ್ಲಿಯೇ ಹೆಚ್ಚಾಗಿ ಇರುವದರಿಂದ ಅಂತಹ ಸ್ಥಳಗಳಲ್ಲಿಯೇ ಇವರು ಬಳಸುವ ಕನ್ನಡ ಭಾಷಾಪ್ರಭೇದಗಳನ್ನು ಗುರುತಿಸಬಹುದು. ಲಂಬಾಣಿಗರು, ಗೊಂಡರು, ಮುಂತಾದ ಹೊರನಾಡಿನ ಜನಾಂಗದವರು ಮಾತನಾಡುವ ಕನ್ನಡಪ್ರಭೇದವನ್ನು ಇಲ್ಲಿ ಗಮನಿಸಬಹುದು.

### ೫.೪ ರಾಜಕೀಯ

ಭಾಷಾಪ್ರಭೇದಗಳನ್ನುಂಟುಮಾಡುವಲ್ಲಿ ರಾಜಕೀಯ ಕಾರಣವೂ ಒಂದು ಗಮನಾರ್ಹ ಅಂಶವಾಗಿದೆ. ಆಳರಸರು ಆಡಳಿತೆಯ ಕಾರಣಗಳಿಗಾಗಿ ಕೆಲವು ಜಿಲ್ಲೆ ಹಾಗೂ ತಾಲೂಕು ಗಡಿಯನ್ನು ಆಗಾಗ್ಗೆ ಬದಲಿಸಬಹುದು. ಹಾಗೆ ಬದಲಿಸಿದಾಗ ಜನರ ಸಂಪರ್ಕ ಮೊದಲು ಇದ್ದ ತಾಲೂಕು ಅಥವಾ ಜಿಲ್ಲಾ ಸ್ಥಳದೊಡನೆ ಕಡಿದು ಹೋಗುವುದರಿಂದ ಕ್ರಮೇಣ ಅವರ ಭಾಷಾ ಪ್ರಭೇದದಲ್ಲಿ ವ್ಯತ್ಯಾಸ ಉಂಟಾಗತೊಡಗಬಹುದು. ಆದರೆ ಈ ವ್ಯತ್ಯಾಸದ ಗತಿ ಬಹಳ ಸಾವಧಾನವಾಗಿರುತ್ತದೆ. ಮೊದಲಿದ್ದ ತಾಲೂಕು ಸ್ಥಳ ಅಥವಾ ಜಿಲ್ಲಾ ಸ್ಥಳ ಹಳ್ಳಿಗೆ ಹೆಚ್ಚು ಸಮೀಪವಾಗಿದ್ದು ಸಂಪರ್ಕ-ಸಾಧನ, ವ್ಯಾಪಾರ ಮುಂತಾದ ದೃಷ್ಟಿಯಿಂದ ಅನುಕೂಲವಾಗಿದ್ದರೆ ಆ ಹಳ್ಳಿಯ ಪ್ರಭೇದದಲ್ಲಿ ಬಹುಕಾಲ ಯಾವ ವ್ಯತ್ಯಾಸವೂ ಆಗದೆ ಉಳಿಯುತ್ತದೆ. ಆಳರಸರು ತಮ್ಮ ಭಾಷೆಯನ್ನು ನಾಡಿನಲ್ಲಿ ಆಡಳಿತ ಭಾಷೆಯಾಗಿ ಹೇರುವುದರಿಂದ ಅನಿವಾರ್ಯವಾಗಿ ಆ ಭಾಷೆಯ ಪ್ರಭಾವ ಸ್ಥಳೀಯ ಭಾಷಾಪ್ರಭೇದಗಳ ಮೇಲಾಗುತ್ತದೆ. ರಾಜ್ಯದ ರಾಜಧಾನಿಯಲ್ಲಿ ಅಂಥ ಭಾಷಾಪ್ರಭೇದ ಇನ್ನೂ ಸ್ಪಷ್ಟವಾಗಿರುತ್ತದೆ. ಪರಭಾಷಾ ಅರಸರ ಆಳ್ವಿಕೆ ಎಷ್ಟು ದೀರ್ಘವಾಗಿರುತ್ತದೆಯೋ ಅಷ್ಟು ಗಾಢವಾಗಿ ಆ ಭಾಷೆ ಸ್ಥಳೀಯ ಪ್ರಭೇದಗಳ ಮೇಲೆ ತನ್ನ ಅಚ್ಚೊತ್ತುತ್ತದೆ. ಆಳ್ವಿಕೆ ಬೇಗ ಕೊನೆಗೊಂಡರೆ ಪ್ರಭಾವ ತೆಳುವಾಗಿರುತ್ತದೆಯಲ್ಲದೆ ಆಳ್ವಿಕೆ ಮುಗಿದಮೇಲೆ ಕ್ರಮೇಣ ಮರೆಯಾಗಿ ಹೋಗುತ್ತದೆ. ಈ ರೀತಿ ಪ್ರಭೇದಗಳ ಮೇಲೆ ಆಡಳಿತ ಭಾಷೆಯು ಬೀರುವ ಪ್ರಭಾವ ಹೆಚ್ಚು ದಟ್ಟವಾಗಿದ್ದರೆ ಮುಂದೆ ರಾಜಕೀಯ ಬದಲಾವಣೆಯಾಗಿ ಆ ಪ್ರಭಾವಿತ ಪ್ರದೇಶ ಹೊಸ ರಾಜ್ಯದಲ್ಲಿ ಸೇರಿದಾಗ ಆ ಪ್ರಭೇದಗಳೆಲ್ಲ ಒಂದು ಉಪಭಾಷೆಯಾಗಿ ನಿಲ್ಲುತ್ತವೆ.

ಉತ್ತರ ಕರ್ನಾಟಕದ ಬೀದರ, ಕಲಬುರ್ಗಿ ಹಾಗೂ ರಾಯಚೂರು ಪ್ರದೇಶಗಳು ಸುಮಾರು ೬೦೦ ವರ್ಷಗಳ ಸುದೀರ್ಘಕಾಲ ಮಹಮ್ಮದೀಯರ ಆಡಳಿತೆಗೆ ಒಳಪಟ್ಟದ್ದರಿಂದ ಈ ಭಾಗದ ಪ್ರಭೇದಗಳ ಮೇಲೆ ಆಳರಸರ ಭಾಷೆಯಾದ ಉರ್ದು ಪ್ರಭಾವ ದಟ್ಟವಾಯಿತು. ಆದರೆ ಈ ಪ್ರದೇಶದ ವಾಯುವ್ಯ ಹಾಗೂ ಉತ್ತರ ಗಡಿ ಭಾಗಗಳಲ್ಲಿ ಕೆಲವು ಪ್ರದೇಶ ಮರಾಠರ ವಶದಲ್ಲಿ ಉಳಿದುದರಿಂದ ಆ ಪ್ರದೇಶ ಅಂದರೆ ಈಗ ಮಹಾರಾಷ್ಟ್ರಕ್ಕೆ ಹೊಂದಿಕೊಂಡಿರುವ ಗಡಿಭಾಗ ಉರ್ದು ಬದಲಾಗಿ ಮರಾಠಿ ಪ್ರಭಾವದಿಂದೊಡಗೂಡಿದೆ. ಬೆಳಗಾವಿ, ವಿಜಾಪುರ ಜಿಲ್ಲೆಯ ಗಡಿಪ್ರದೇಶಗಳಲ್ಲಿಯ ಮರಾಠಿ ಪ್ರಭಾವಿತ ಪ್ರಭೇದಗಳನ್ನು

ಗುರುತಿಸಬಹುದು. ಈ ರೀತಿ ಒಂದು ಕಾಲಕ್ಕೆ ಅನ್ಯಭಾಷಾ ಆಡಳಿತಗಾರರಿಂದಾಗಿ ಆ ಪ್ರದೇಶದ ಪ್ರಭೇದಗಳಲ್ಲಿ ಆಡಳಿತ ಭಾಷೆಯ ಪ್ರಭಾವವುಂಟಾಗಿ ಅದು ವಿಶಿಷ್ಟವಾಗಿ ನಿಲ್ಲಬಹುದಾಗಿದೆ. ಮೈಸೂರು ಅರಸರ ಆಳ್ವಿಕೆಯಲ್ಲಿ ಜಯಚಾಮರಾಜ ಒಡೆಯರ್ ಅವರ ಆಳ್ವಿಕೆಯವರೆಗೂ ಆಡಳಿತೆಯ ಕೆಲವು ಮುಖ್ಯ ಸ್ಥಾನಗಳು ಅಯ್ಯಂಗಾರ (ತಮಿಳು) ಜನಾಂಗದವರಿಗೆ ದೊರೆತಿದ್ದರಿಂದ ಕೆಲ ಕಾಲದವರೆಗಾದರೂ ಆ ಪ್ರದೇಶದಲ್ಲಿ ಸ್ವಲ್ಪಮಟ್ಟಿಗೆ ತಮಿಳು ಪ್ರಭಾವವುಂಟಾಯಿತು. ಹಾಗೆಯೆ ಮುಧೋಳ, ಜಮಖಂಡಿ, ಸೊಂಡೂರು, ನರಗುಂದ ಮುಂತಾದ ಉತ್ತರ ಕರ್ನಾಟಕದ ಚಿಕ್ಕಪುಟ್ಟ ಸಂಸ್ಥಾನಗಳು ಮರಾಠಾ ಆಡಳಿತಗಾರರ ವಶದಲ್ಲಿದ್ದುದರಿಂದ ಆ ಭಾಗದಲ್ಲಿ ಸ್ಥಳೀಯವಾಗಿ ಮರಾಠಿ ಭಾಷೆಯ ಪ್ರಭಾವವಾಯಿತು. ಮಹಮ್ಮದೀಯ ಅರಸರ ಕಾಲದಲ್ಲಿ ಕರ್ನಾಟಕದ ಅನೇಕ ಭಾಗಗಳಲ್ಲಿ ಉರ್ದು ಪ್ರಭಾವ ಉಂಟಾಯಿತು. ಕಾಸರಗೋಡು, ನೀಲಗಿರಿ ಪ್ರದೇಶ, ಅಕ್ಕಲಕೋಟೆ, ಸೊಲ್ಲಾಪುರ, ಆದವಾನಿ ಮುಂತಾದ ಕನ್ನಡ ಪ್ರದೇಶ ಇಂದು ರಾಜಕೀಯವಾಗಿ ಪರಭಾಷಾ ಪ್ರಾಂತದಲ್ಲಿ ಸೇರಿಸಲ್ಪಟ್ಟಿರುವುದರಿಂದ ಸಹಜವಾಗಿ ಆಯಾ ರಾಜ್ಯಭಾಷೆಗಳ ಪ್ರಭಾವ ಅಲ್ಲಿಯ ಕನ್ನಡದ ಮೇಲಾಗಿದೆ. ಆಡಳಿತೆಯ ಅನುಕೂಲತೆಗಾಗಿ ಮಾಡುವ ಗಡಿ ಬದಲಾವಣೆಗಳಿಂದ ಆಡಳಿತಗಾರರ ಭಾಷಾ ಪ್ರಭಾವ ಆ ಪ್ರದೇಶದ ಭಾಷೆಯ ಮೇಲೆ ಬೀಳುವುದರಿಂದ ಭಾಷಾಪ್ರಭೇದಗಳುಂಟಾಗುತ್ತವೆ. ಆದರೂ ಈ ರಾಜಕೀಯ ಕಾರಣಗಳೇ ಇಡೀ ಪ್ರದೇಶದ ಮೇಲೆ ಪರಿಣಾಮವನ್ನುಂಟುಮಾಡುವುದರಿಂದ ಅಂಥ ಸ್ಥಳೀಯ ಪ್ರಭೇದ- ಗಳುಂಟಾಗುವುದು ಕ್ವಚಿತ್ತಾಗಿ. ಕನ್ನಡ ಭಾಷೆಯಲ್ಲಿ ರಾಜಕೀಯ ಕಾರಣಗಳಿಂದಲೇ ಆದ ಪ್ರಭೇದಗಳನ್ನು ಈಗ ಗುರುತಿಸುವುದು ಕಷ್ಟ.

## ೫.೫ ಅನ್ಯಭಾಷಾ ಪ್ರಭಾವ

ಯಾವ ಭಾಷೆಯೂ ತನ್ನ ಮಡಿವಂತಿಕೆಯನ್ನು ಬಹಳ ಕಾಲ ಕಾಯ್ದುಕೊಳ್ಳಲಾರದು. ರಾಜಕೀಯ ಕಾರಣದಿಂದಾಗಿ ಈ ಮೊದಲೆ ಹೇಳಿದಂತೆ ಆಳರಸರ ಭಾಷೆ ಸ್ಥಳೀಯ ಭಾಷೆಗೆ ಸಂಬಂಧಿಸಿರದಿದ್ದರೆ ಕ್ರಮೇಣ ಆ ಭಾಷೆ ಸ್ಥಳೀಯ ಭಾಷೆಯ ಮೇಲೆ ಪ್ರಭಾವ ಬೀರತೊಡಗುತ್ತದೆ. ಮೊದಲು ರಾಜಧಾನಿ ಹಾಗೂ ಅದರ ಸುತ್ತಮುತ್ತಲಿನ ಪ್ರದೇಶ, ಅನಂತರ ಆಡಳಿತ ಕೇಂದ್ರಗಳು ಅವುಗಳ ಸುತ್ತಲಿನ ಪ್ರದೇಶ ಹೀಗೆ ಪ್ರಭಾವ ಪಸರಿಸುತ್ತ ಹೋಗುತ್ತದೆ. ರಾಜಕೀಯ ಗಡಿಗಳನ್ನು ದಾಟಿಯೂ ಒಂದು ಭಾಷೆ ಬಳಕೆಗೊಳ್ಳುತ್ತಿರಬಹುದು. ಭಾಷಾಗಡಿ ಪ್ರದೇಶಗಳಲ್ಲಿಯ ಜನರು ಸ್ಥಳೀಯ ಭಾಷೆ, ಆಡಳಿತ ಭಾಷೆ ಇವುಗಳಲ್ಲಿ ಮಾತೃಭಾಷೆಯೊಂದಿಗೆ ಕನಿಷ್ಟಪಕ್ಷ ಒಂದನ್ನಾದರೂ ಬಲ್ಲವರಾಗಿರುತ್ತಾರೆ. ಹೀಗಾಗಿ ಆ ಪ್ರದೇಶ ದ್ವಿಭಾಷಾ ಪ್ರದೇಶ ಇಲ್ಲವೆ ಬಹುಭಾಷಾ ಪ್ರದೇಶವೆನಿಸುತ್ತದೆ. ಯಾವುದೇ ಕಾರಣವಿರಲಿ ಅನ್ಯಭಾಷಾ ಪ್ರಭಾವ ಸುತ್ತಲಿನ ಪರಿಸ್ಥಿತಿಗನುಗುಣವಾಗಿ ಒಂದು ಪ್ರದೇಶದ ಸ್ಥಳೀಯ ಭಾಷೆಯ ಮೇಲೆ ಗಾಢವಾಗಿ ಆಗುತ್ತ ಹೋದಂತೆ ಅದರದೇ ಆದ ವಿಶಿಷ್ಟ ಭಾಷೆಗಿಂತ ಭಿನ್ನವಾಗಿ ತೋರಲಾರಂಭಿಸುತ್ತದೆ. ಆಗ ಅದನ್ನು ಪ್ರಾದೇಶಿಕ ಪ್ರಭೇದವಾಗಿ ಪರಿಗಣಿಸಲ್ಪಡಬೇಕಾಗುತ್ತದೆ. ಅನ್ಯಭಾಷೆಯ ಪ್ರಭಾವ ಈ ರೀತಿ ಪ್ರಭೇದಗಳಾಗಲು ಅವಕಾಶ ಮಾಡಿಕೊಡುವ ಪ್ರಧಾನ ಅಂಶವಾಗಿದೆ. ಅನ್ಯಭಾಷಾ ಪ್ರಭಾವ ಎಂದರೆ ಸಾಮಾನ್ಯವಾಗಿ ಸ್ಥಳೀಯ ಭಾಷೆಯಲ್ಲಿ ಹಲವು ಬಗೆಯಲ್ಲಿ ನಡೆಯುವ ಸ್ವೀಕರಣ.

ಕನ್ನಡ ಭಾಷೆಯ ಮೇಲೆ ಅನೇಕ ಅನ್ಯಭಾಷೆಗಳು ಪ್ರಭಾವ ಬೀರಿವೆ. ಪ್ರಭೇದಗಳನ್ನುಂಟುಮಾಡುವಲ್ಲಿ ಅನ್ಯಭಾಷೆಗಳು ಯಾವ ಯಾವ ಕನ್ನಡ ಪ್ರದೇಶಗಳಲ್ಲಿ ಪ್ರಭಾವ ಬೀರಿವೆಯೆಂಬುದನ್ನು ಕರ್ನಾಟಕದ ಈಗಿನ ರಾಜಕೀಯ ಗಡಿಯನ್ನು ಆಧಾರವಾಗಿಟ್ಟುಕೊಂಡು ಇಲ್ಲಿ ವಿವರಿಸಲು ಪ್ರಯತ್ನಿಸಲಾಗಿದೆ. ಕನ್ನಡದ ಮೇಲೆ ಪ್ರಭಾವ ಬೀರಿದ ಪ್ರಮುಖ ಅನ್ಯಭಾಷೆಗಳೆಂದರೆ: ೧. ಸಂಸ್ಕೃತ, ೨. ಇಂಗ್ಲಿಷ್, ೩. ಉರ್ದು, ೪. ಮರಾಠಿ, ೫. ತೆಲುಗು, ೬. ತಮಿಳು, ೭. ಮಲೆಯಾಳಂ, ೮. ತುಳು, ೯. ಕೊಂಕಣಿ, ೧೦. ಹಿಂದಿ.

ಇವುಗಳಲ್ಲಿ ಸಂಸ್ಕೃತ, ಇಂಗ್ಲಿಷ್, ಉರ್ದು ಹಾಗೂ ಹಿಂದಿ ಭಾಷೆಗಳ ಪ್ರಭಾವ ಸಾಮಾನ್ಯವಾಗಿ ಕರ್ನಾಟಕದ ತುಂಬ ಆಗಿರುವುದರಿಂದ ಇವುಗಳ ಸಾಕಷ್ಟು ಶಬ್ದಗಳು ಕನ್ನಡದ ಉಡಿಯನ್ನು ತುಂಬಿವೆ. ಸಂಸ್ಕೃತ ಈಗ ಬಹುಕಾಲದಿಂದ ಬಳಕೆಯಲ್ಲಿಲ್ಲದ ಭಾಷೆಯಾಗಿರುವುದರಿಂದ ಪ್ರಭಾವಿತ ಪ್ರದೇಶ ಅಥವಾ ಪ್ರಭೇದವನ್ನು ಗುರುತಿಸುವುದು ಸಾಧ್ಯವಿಲ್ಲ. ಬ್ರಾಹ್ಮಣರ ಕನ್ನಡದಲ್ಲಿ ಸಂಸ್ಕೃತ ಪ್ರಭಾವದ ಹೆಚ್ಚಳವನ್ನು ಗುರುತಿಸಬಹುದು. ಮಹಾಪ್ರಾಣಗಳ ಉಚ್ಚಾರ ಇಡೀ ಕನ್ನಡ ನಾಡಿನ ಬ್ರಾಹ್ಮಣರಲ್ಲಿ ಹೆಚ್ಚು ಉಳಿದಿರುವುದನ್ನಿಲ್ಲಿ ಗಮನಿಸಬಹುದು. ಕರ್ನಾಟಕದ ಬಹು ಪ್ರದೇಶಗಳಲ್ಲಿ ಉರ್ದು ಪ್ರಭಾವ ಬೀರಿದೆಯಾದರೂ ನಾಡಿನ ಉತ್ತರ ಭಾಗದ ಬೀದರ, ಕಲಬುರ್ಗಿ, ರಾಯಚೂರು ಹಾಗೂ ವಿಜಾಪುರ ಜಿಲ್ಲೆಗಳಲ್ಲಿ ಇತರ ಪ್ರದೇಶಗಳಿಗಿಂತ ಪ್ರಭಾವ ಹೆಚ್ಚು ದಟ್ಟವಾಗಿದೆ. ಬೀದರ ಹಾಗೂ ವಿಜಾಪುರ ಜಿಲ್ಲೆಗಳಲ್ಲಿ ಇತರ ಪ್ರದೇಶಗಳಿಗಿಂತ ಪ್ರಭಾವ ಹೆಚ್ಚು ದಟ್ಟವಾಗಿದೆ. ಬೀದರ ಹಾಗೂ ಕಲಬುರ್ಗಿ ಜಿಲ್ಲೆಗಳಲ್ಲಂತೂ ಉರ್ದು ಪ್ರಭಾವದ ಆಧಾರದ ಮೇಲೆ ಆ ಜಿಲ್ಲೆಗಳ ಭಾಷೆಯನ್ನು ಕನ್ನಡದ ಉಪಭಾಷೆಯೆಂದು ಪರಿಗಣಿಸಬಹುದಾಗಿದೆ. ಹಿಂದಿ ಭಾಷೆಯು ರಾಷ್ಟ್ರೀಯ ಭಾಷೆಯಾಗಿರುವುದರಿಂದ ಇತ್ತೀಚೆಗಷ್ಟೇ ಇತ್ತಿತ್ತಲಾಗಿ ಅದರ ಪ್ರಭಾವ ಕಂಡುಬರುತ್ತಿದೆ. ಆದರೆ ಉರ್ದು-ಹಿಂದಿಗಳಲ್ಲಿಯ ಅಂತರ ಕನ್ನಡ ಮಾತಾಡುವ ಸಾಮಾನ್ಯರ ದೃಷ್ಟಿಯಲ್ಲಿ ಗೌಣ.

ಇಂಗ್ಲಿಷ್ ಪ್ರಭಾವ ಇತ್ತೀಚಿನದಾದರೂ ಹೆಚ್ಚು ವ್ಯಾಪಕವಾದುದು. ಸುಶಿಕ್ಷಿತವರ್ಗದವರ ಪ್ರಭೇದದಲ್ಲಿ ಇದು ಸ್ಪಷ್ಟವಾಗಿರುವುದನ್ನು ಗಮನಿಸಬಹುದು. ಇಂದು ಇಂಗ್ಲಿಷ್ ಜನ ನಮ್ಮ ನಾಡನ್ನು ಬಿಟ್ಟು ಹೋಗಿದ್ದರೂ ವೈಜ್ಞಾನಿಕ ಸಂಶೋಧನಗಳಿಂದ ನಾಗರಿಕತೆ ಹಳ್ಳಿ ಹಳ್ಳಿಗಳಿಗೂ ಪಸರಿಸುತ್ತಿರುವುದರಿಂದ ಅವಿದ್ಯಾವಂತ ಹಳ್ಳಿಗರಲ್ಲೂ ಇಂಗ್ಲಿಷ್ ಶಬ್ದ ಬಳಕೆ ಹೆಚ್ಚುತ್ತಿದೆ. ಅವಿದ್ಯಾವಂತರು ಇಂಗ್ಲಿಷ್ ಪದಗಳನ್ನು ಕನ್ನಡ ರಚನೆಗನುಗುಣವಾಗಿ ತದ್ಭವೀಕರಿಸಿಕೊಂಡು ಬಳಸುತ್ತಾರೆ. ಇಂಗ್ಲಿಷ್ ಪ್ರಭಾವದ ಆಧಾರದಿಂದ ಪ್ರಭೇದ ಗುರುತಿಸುವುದು ಸುಲಭವಲ್ಲ. ಆದರೂ ಮೈಸೂರು, ಬೆಂಗಳೂರು ಮೊದಲಾದ ಕರ್ನಾಟಕದ ಕೆಲವು ದಕ್ಷಿಣ ಜಿಲ್ಲೆಗಳ ಜನರ ಮಾತಿನಲ್ಲಿ ಇಂಗ್ಲಿಷ್ ಪದಗಳು ಹೆಚ್ಚು ಬಳಕೆಯಲ್ಲಿವೆ. ಕೈಲಾಸಂ ಅವರ ನಾಟಕಗಳಲ್ಲಿ ಬರುವ ಸಂಭಾಷಣೆಗಳನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.

ಕಾರವಾರ, ಬೆಳಗಾವಿ, ವಿಜಾಪುರ, ಕಲಬುರ್ಗಿ, ಹಾಗೂ ಬೀದರ ಜಿಲ್ಲೆಗಳ ಗಡಿ ಪ್ರದೇಶಗಳಲ್ಲಿ ಮರಾಠಿ ಪ್ರಭಾವ ಸಾಕಷ್ಟಿದೆ. ಈ ಪ್ರದೇಶವೆಲ್ಲ ದ್ವಿಭಾಷಾ ಪ್ರದೇಶವಾದ್ದರಿಂದ ಕನ್ನಡ-ಮರಾಠಿ ಎರಡೂ ಭಾಷೆಗಳನ್ನೂ ಇಲ್ಲಿಯ ಜನ ಬಲ್ಲವರು. ಮರಾಠಿ ಪ್ರಭಾವಿತ ಈ ಪ್ರದೇಶದ ಕನ್ನಡವನ್ನು ಒಂದು ಪ್ರಭೇದವೆಂದು ಪರಿಗಣಿಸಬಹುದಾಗಿದೆ. ಕಾರವಾರ ಹಾಗೂ ಬೆಳಗಾವಿ ಜಿಲ್ಲೆಗಳಲ್ಲಿ ಕೊಂಕಣಿ ಭಾಷೆಯ ಪ್ರಭಾವವೂ ತಕ್ಕಮಟ್ಟಿಗೆ ಕಾಣುತ್ತದೆ. ಆದರೆ ಪ್ರಭೇದವೆಂದು ಗುರುತಿಸುವಷ್ಟರ ಮಟ್ಟಿಗಲ್ಲ.

ಕನ್ನಡ ಭಾಷೆ ತನ್ನ ಸೋದರ ಭಾಷೆಗಳಿಂದಲೂ ಗಡಿ ಭಾಗಗಳಲ್ಲಿ ಸ್ವಾಭಾವಿಕವಾಗಿ ಪ್ರಭಾವಿತಗೊಂಡಿದೆ. ಬೀದರ, ಕಲಬುರ್ಗಿ, ಬಳ್ಳಾರಿ, ಚಿತ್ರದುರ್ಗ, ತುಮಕೂರು, ಕೋಲಾರ, ಈ ಆರು ಜಿಲ್ಲೆಗಳ ಪೂರ್ವ ಗಡಿಭಾಗವೆಲ್ಲ ತೆಲುಗು ಭಾಷೆಯ ಸಂಪರ್ಕ ಹೊಂದಿದೆ. ಬೀದರ, ಕಲಬುರ್ಗಿಗಳಿಗಿಂತ ಬಳ್ಳಾರಿಯಿಂದ ದಕ್ಷಿಣಕ್ಕೆ ಕೋಲಾರದವರೆಗಿನ ಗಡಿಭಾಗದಲ್ಲಿ ಹೆಚ್ಚು ಪ್ರಭಾವ ಎದ್ದು ಕಾಣುತ್ತದೆ. ಬೆಂಗಳೂರು ಜಿಲ್ಲೆಯ ತೀರ ಸ್ವಲ್ಪ ಭಾಗ ಮಾತ್ರ ತಮಿಳುನಾಡಿನ ಗಡಿಗೆ ಹತ್ತಿದ್ದರೂ ಆ ಭಾಗದಲ್ಲಿ ತೆಲುಗಿನ ಪ್ರಭಾವವೇ ಹೆಚ್ಚಿಗಿದೆ. ಈ ಪ್ರದೇಶವನ್ನೆಲ್ಲ ಒಂದು ಪ್ರಭೇದ ಎಂದು ಪರಿಗಣಿಸಬಹುದಾಗಿದೆ.

ಮೈಸೂರು ಜಿಲ್ಲೆಯ ದಕ್ಷಿಣ ಪ್ರದೇಶವೆಲ್ಲ ತಮಿಳುನಾಡಿಗೆ ಹತ್ತಿರುವುದರಿಂದ ಸಹಜವಾಗಿ ತಮಿಳಿನ ಪ್ರಭಾವ ಆ ಭಾಗಗಳಲ್ಲಿ ಆಗಿದೆ. ಬೆಂಗಳೂರು ಜಿಲ್ಲೆಯ ದಕ್ಷಿಣಗಡಿ ಪ್ರದೇಶವೂ ತಮಿಳುನಾಡಿಗೆ

ಹೊಂದಿಕೊಂಡಿದ್ದರೂ ಅಲ್ಲಿ ಹೇಳಿಕೊಳ್ಳುವಂಥ ಪ್ರಭಾವ ಉಂಟಾಗಿಲ್ಲ. ತಮಿಳು ಪ್ರಭಾವಿತ ಕನ್ನಡವನ್ನು ಪ್ರಭೇದವೆಂದು ಗಣಿಸುವಷ್ಟರಮಟ್ಟಿಗೆ ಆ ಪ್ರದೇಶ ನಿಲ್ಲುತ್ತದೆಯೋ ಎಂಬುದು ಪರಿಶೀಲಿಸಬೇಕಾದ ಅಂಶ.

ಮೈಸೂರು, ಕೊಡಗು ಹಾಗೂ ದಕ್ಷಿಣಕನ್ನಡ ಜಿಲ್ಲೆಗಳಲ್ಲಿ ಮಲೆಯಾಳಂ ಮತ್ತು ತುಳು ಭಾಷೆಗಳ ಪ್ರಭಾವವನ್ನು ಮನಗಾಣಬಹುದು. ಕೇರಳದ ಗಡಿಪ್ರದೇಶ ಈ ಜಿಲ್ಲೆಗಳ ಪಶ್ಚಿಮಗಡಿಗೆ ಹತ್ತಿಕೊಂಡಿದೆ. ದಕ್ಷಿಣಕನ್ನಡ ಜಿಲ್ಲೆಯಲ್ಲಿ ಮಲೆಯಾಳಂ ಪ್ರಭಾವ ಹೆಚ್ಚು ಇದೆ. ಮೈಸೂರು ಜಿಲ್ಲೆಯಲ್ಲಿ ಅವೆಡರ ಪ್ರಭಾವ ಇನ್ನೂ ಕಡಿಮೆ. ತುಳು ಮಲೆಯಾಳಂ ಪ್ರಭಾವವುಳ್ಳ ಪ್ರದೇಶಗಳನ್ನು ಪ್ರಭೇದಗಳೆಂದು ಗುರುತಿಸಬಹುದು.

ಕೊಡಗು, ಇರುಳ, ಕೊರಗ, ಮುಂತಾದ ಸೋದರ ಭಾಷೆಗಳ ಕನ್ನಡದ ಮೇಲೆ ಸ್ಥಳೀಯವಾಗಿ ಕೆಲವು ಜನಾಂಗಗಳ ಮೇಲೆ ಪ್ರಭಾವ ಬೀರಿರಬಹುದಾದರೂ ಅವುಗಳನ್ನು ಪ್ರಭೇದಗಳೆಂದು ಗಣಿಸುವಷ್ಟು ಆಗಿದೆಯೋ? ಎಂಬುದನ್ನು ಪರಿಶೀಲಿಸಬೇಕು.

ಅನ್ಯಭಾಷಾ ಪ್ರಭಾವದಿಂದಾಗಿ ಎದ್ದು ತೋರುವ ಕನ್ನಡ ಪ್ರಭೇದಗಳೆಂದರೆ :

೧. ಉರ್ದು ಪ್ರಭಾವಿತ ಪ್ರಭೇದ
೨. ಮರಾಠಿ ಪ್ರಭಾವಿತ ಪ್ರಭೇದ
೩. ತೆಲುಗು ಪ್ರಭಾವಿತ ಪ್ರಭೇದ
೪. ಮಲೆಯಾಳಂ -ತುಳು ಪ್ರಭಾವಿತ ಪ್ರಭೇದ
೫. ತಮಿಳು ಪ್ರಭಾವಿತ ಪ್ರಭೇದ

ಅನ್ಯಭಾಷಾ ಪ್ರಭಾವ ಒಂದು ಪ್ರದೇಶದ ಎಲ್ಲ ಜನರ ಮೇಲೂ ಒಂದೇ ಮಟ್ಟದಲ್ಲಿ ಆಗುತ್ತದೆಂದು ಹೇಳಲು ಬರುವುದಿಲ್ಲ. ೧. ಹಳ್ಳಿಗರು-ಪಟ್ಟಣಿಗರು, ೨. ವಿದ್ಯಾವಂತರು-ಅವಿದ್ಯಾವಂತರು, ೩. ಗಂಡಸರು-ಹೆಂಗಸರು, ೪. ವಯಸ್ಕರು -ಮಕ್ಕಳು, ೫. ಬ್ರಾಹ್ಮಣರು-ಬ್ರಾಹ್ಮಣೇತರರು ಇವರ ಭಾಷೆಯಲ್ಲಿ ಪ್ರಭಾವದ ವ್ಯತ್ಯಾಸವನ್ನು ಗುರುತಿಸಬಹುದು. ಇದಕ್ಕೆ ಇನ್ನೊಂದು ಕಾರಣವೆಂದರೆ ದ್ವಿಭಾಷಾ ಪ್ರದೇಶದಲ್ಲಿ ಜನರು ಮಾತನಾಡುವ ಸಂದರ್ಭಗಳಲ್ಲಿ ಭಾಷೆಯನ್ನು ಸಂದರ್ಭಕ್ಕೆ ತಕ್ಕಂತೆ ಕೋಡ್ ಬದಲಿಸಿ ಮಾತನಾಡಲು ಶಕ್ತರಾಗಿರುತ್ತಾರೆ. ಇದನ್ನು ಸಂಕ್ಷೇಪವಾಗಿ ಹೀಗೆ ಸೂಚಿಸಬಹುದಾಗಿದೆ :

ಮಾತಿನ ಸಂದರ್ಭ
- ಕನ್ನಡಿಗರೊಡನೆ
  - ಸಹಜ ಸಂದರ್ಭ
    - ಧರ್ಮ
    - ವ್ಯವಹಾರ ಸರ್ಕಾರಿ ಕೆಲಸ
    - ಸಂಪ್ರದಾಯಿಕ
  - ಅಸಹಜ ಸಂದರ್ಭ
    - ಲೇಖನ
    - ಹಾಸ್ಯ ಇತರ
- ಕನ್ನಡಿಗರಲ್ಲದವರೊಡನೆ
  - ಅಪರಿಚಿತ
  - ಪರಿಚಿತ
    - ಧರ್ಮ ಗುರು ಇತ್ಯಾದಿ
    - ಮರಾಠಿ ಕೊಂಕಣಿ
    - ತಮಿಳು, ತುಳು ಮಲಿಯಾಳಂ
    - ತೆಲುಗು
    - ಉರ್ದು ಹಿಂದಿ

ಹೀಗೆ ಪ್ರಭೇದಗಳನ್ನು ಗುರುತಿಸುವಾಗ ನಾವು ಸಂದರ್ಭಗಳನ್ನೂ ಲಕ್ಷಿಸಬೇಕಾಗುತ್ತದೆ. ಕನ್ನಡ ಮಾತೃಭಾಷೆಯುಳ್ಳವರು ಸಹಜವಾಗಿ ತಮ್ಮ ಭಾಷೆಯ ವಾತಾವರಣದಲ್ಲಿ ಮಾತನಾಡುವಾಗ ಅವರ

ಮಾತಿನಲ್ಲಿ ಬರುವ ಅನ್ಯಭಾಷಾ ಪದಪ್ರಯೋಗಗಳ ಆಧಾರದ ಮೇಲೆ, ಪ್ರಭಾವಿತ ಪ್ರಭೇದವನ್ನು ಗುರುತಿಸುವುದು ಹೆಚ್ಚು ಸಮಂಜಸವೆನಿಸುತ್ತದೆ.

ಅನ್ಯಭಾಷಾ ಪ್ರಭಾವದಿಂದಾದ ಪ್ರಭೇದಗಳನ್ನು ಈ ಕೆಳಗಿನ ಮಟ್ಟಗಳಲ್ಲಿ ವಿವರಿಸುತ್ತಾರೆ:
ಅನ್ಯಭಾಷಾ ಪ್ರಭಾವದಿಂದಾದ ಕನ್ನಡ ಪ್ರಭೇದದಲ್ಲಿ -

೧. ಸೇರಿರುವ ಹೊಸ ಧ್ವನಿಮಾಗಳು, ಧ್ವನಿಮಾ ಬದಲಾವಣೆಗಳು, ಉಚ್ಚಾರ ಇತ್ಯಾದಿ
೨. ಸೇರಿರುವ ಆಕೃತಿಮಾಗಳು, ಅವುಗಳ ಕ್ರಮ ಇತ್ಯಾದಿ
೩. ಅರ್ಥಕ್ಕೆ ಸಂಬಂಧಿಸಿದ ಬದಲಾವಣೆಗಳು
೪. ವಾಕ್ಯಮಟ್ಟದಲ್ಲಾಗುವ ಬದಲಾವಣೆಗಳು

ಈ ಎಲ್ಲಾ ಮಟ್ಟಗಳಲ್ಲೂ ವ್ಯತ್ಯಾಸ ಇರಬಹುದು ಅಥವಾ ಕೆಲವು ಮಟ್ಟಗಳಲ್ಲಿ ಇರದೇ ಇರಬಹುದು.

ಪ್ರಭೇದಭಾಷೆಗಳ ಗಡಿಗಳನ್ನು ಗುರುತಿಸುವುದು ಕಷ್ಟಸಾಧ್ಯವಾದ ಕಾರ್ಯ. ಪ್ರಭೇದಭಾಷೆ ಎನ್ನುವುದೇ ಅಸ್ಥಿರ ಸೀಮೆಯ ಘಟಕ. ಉಪಭಾಷೆಯ ಗಡಿಗಳನ್ನೇ ನಿಖರವಾಗಿ ಪತ್ತೆ ಹಚ್ಚುವುದು ಕಠಿಣವಿರುವಾಗ ಪ್ರಭೇದಗಳ ಗಡಿಗಳನ್ನು ಗೆರೆಕೊರೆದು ಹೇಳುವುದಂತೂ ದೂರ ಉಳಿಯಿತು. ಗಡಿಪ್ರದೇಶದ ಒಳಭಾಗದಲ್ಲಿ ಬಂದಂತೆ ಅನ್ಯಭಾಷಾ ಪ್ರಭಾವ ಕಡಿಮೆಯಾಗುತ್ತ ಬರುತ್ತದೆ. ಗಡಿ ತಾಲೂಕು ಸ್ಥಳಗಳನ್ನೂ ಕೆಲವು ಸಲ ಪ್ರಭೇದ ಪ್ರತಿನಿಧಿಯೆಂದು ಪರಿಗಣಿಸುವುದು ಕಷ್ಟವಾಗುತ್ತದೆ. ಒಂದೊಂದು ಜಿಲ್ಲೆಯಲ್ಲಿ ಎರಡು ಅಥವಾ ಅದಕ್ಕೂ ಹೆಚ್ಚು ಅನ್ಯಭಾಷಾ ಪ್ರಭಾವವೂ ಆಗಿರುವುದನ್ನು ಗಮನಿಸಬಹುದು. (ಕೋಷ್ಟಕ ನೋಡಿ)

ಈಗಾಗಲೆ ಸೂಚಿಸಿರುವ ಅನ್ಯಭಾಷಾ ಪ್ರಭಾವಿತ ಪ್ರಭೇದಗಳಲ್ಲಿ ಎದ್ದುಕಾಣುವ ಪ್ರಭಾವಿತ ಅಂಶಗಳನ್ನು ಆಯಾ ಜಿಲ್ಲೆಗೆ ಸಂಬಂಧಿಸಿದಂತೆ ಇಲ್ಲಿ ಕ್ರೋಢೀಕರಿಸಲಾಗಿದೆ. ಇದರಿಂದ ಆ ನಾಲ್ಕು ಪ್ರಭೇದಗಳ ಕಲ್ಪನೆ ಉಂಟಾಗುತ್ತದೆ.

**ಉರ್ದು ಪ್ರಭಾವಿತ ಪ್ರಭೇದ :**

ಬೀದರ, ಕಲಬುರ್ಗಿ, ಜಿಲ್ಲೆಗಳ ಬಹುಭಾಗ ಹಾಗೂ ರಾಯಚೂರು ಜಿಲ್ಲೆಯ ರಾಯಚೂರು ತಾಲೂಕು, ವಿಜಾಪುರ ಜಿಲ್ಲೆಯ ಸಿಂದಗಿ ತಾಲೂಕಿನ ಪೂರ್ವ ಭಾಗಗಳು ಸಾಮಾನ್ಯವಾಗಿ ಈ ಪ್ರಭೇದದ ಪ್ರದೇಶವೆನ್ನಬಹುದು. ಈ ಪ್ರದೇಶದಲ್ಲಿ ಉರ್ದು ಪ್ರಭಾವಕ್ಕೆ ಕಾರಣವೆಂದರೆ ಸುಮಾರು ೬೦೦ ವರ್ಷಗಳ ಸುದೀರ್ಘ ಅವಧಿಯ ಮುಸ್ಲಿಮ ಅರಸರ ಆಳ್ವಿಕೆ. ಈಗ ಪೂರ್ವ ಗಡಿ ಭಾಗದಲ್ಲಿ ಆಂಧ್ರಪ್ರದೇಶದ ತೆಲುಗು ಗಡಿ ಭಾಗವಾಗಿದೆ. ಇಲ್ಲಿ ಕ್ರಮೇಣ ಉರ್ದುಪ್ರಭಾವ ಕಡಿಮೆಯಾಗುತ್ತಿದೆ.

ಈ ಪ್ರಭೇದದಲ್ಲಿ ವಸ್ತುವಾಚಕಗಳು, ಭಾವನಾಮಗಳು, ಆಡಳಿತೆಗೆ ಸಂಬಂಧಿಸಿದ ಪದಗಳು, ಸಂಖ್ಯಾವಾಚಿಗಳು, ವಿಶೇಷಣಗಳು ಮುಂತಾದ ಲೆಕ್ಕವಿಲ್ಲದಷ್ಟು ಉರ್ದು ಪದಗಳು ಸಹಜವಾಗಿ ಸೇರಿವೆ.

ಕಿಲಾ, ಸವಾರಿ, ಜಲಸಾ, ಧೋಬಿ, ರಜಾಯಿ, ಟಪ್ಪಾಖಾನ, ದುಕಾನ, ಖಾರಿಫ್, ರಬ್ಬಿ, ಓಕಮತ್, ಅಮೀನಸಾಬ, ಫ್ರೋತ್ರೀನಸಾಬ, ನಜರ, ಒಹದಾ, ನುಜುಲ್, ತಪಸೀಲ್, ಬಯಾನ, ಗರಂ, ಸರ್ದಿ, ಬಾರಿಕ್, ಕಿರಾಯ್, ತೇಜ, ಬತಾಯಿ, ಖರಾಬ್, ದುನಿಯಾದ್, ಗುಂಜಾಯಿಷ್, ಮುಷ್ಕಿಲ್, ಮಜಬೂರ, ಷಿಕಾಯತ್, ಇಜ್ಜತ್, ಎಕ್, ದೋ, ತೀನ್, ಅಸ್ಸಿ, ನವ್ವದ ....

ಇಂತಹ ಸಾವಿರಾರು ಪದಗಳಲ್ಲಿ ಕೋರ್ಟು, ಕಛೇರಿ, ದಿನನಿತ್ಯದ ವ್ಯವಹಾರ, ಆಡಳಿತ ಇವುಗಳಿಗೆ ಸಂಬಂಧಿಸಿದವುಗಳಲ್ಲದೆ ಆಟ-ಪಾಠ, ವನಸ್ಪತಿ, ಹೂ-ಹಣ್ಣು, ಪಕ್ಷಿ-ಪ್ರಾಣಿಗಳ ಹೆಸರುಗಳು, ತಿಂಡಿ-ತಿನಿಸು,

ಅಡಿಗೆಯ ಹೆಸರುಗಳು, ನಿತ್ಯ ಬಳಕೆಯ ವಸ್ತು ನಾಮಗಳು, ಆಭರಣ, ಬಟ್ಟೆ-ಬರೆ, ಸಂಗೀತ, ಪಂಚಾಂಗ ಇತ್ಯಾದಿಗೆ ಸಂಬಂಧಿಸಿದ ಅನೇಕ ಬಗೆಯ ಉರ್ದು ಪದಗಳು ಇಂದಿಗೂ ಈ ಭಾಗದ ಜನರ ಆಡುನುಡಿಯಲ್ಲಿ ಹಾಸುಹೊಕ್ಕಾಗಿದೆ.

ಕ್ರಿಯಾಪದ, ಅಂಗಾಂಗಗಳ ಹೆಸರುಗಳು, ಸಂಬಂಧಕಾವ್ಯಯಗಳು, ದ್ವಿರುಕ್ತಿಗಳು, ಜೋಡು ಪದಗಳು, ಗಾದೆಗಳು, ಮಕ್ಕಳಾಟದ ಮಾತುಗಳು, ಸಂಬೋಧನೆ, ಎಚ್ಚರಿಕೆ, ಉದ್ಗಾರ, ಅವಧಾರಣೆ, ಮುಂತಾದವುಗಳಿಗೆ ಸಂಬಂಧಿಸಿದ ಪದಗಳು ಬೈಗುಳಗಳು ನಿಷೇಧಾರ್ಥಕಗಳು, ಉರ್ದು ಸಂಸ್ಕೃತಿಗೆ ಸಂಬಂಧಿಸಿದ ಪದಗಳು, ಸ್ಥಳನಾಮಗಳು, ಹೀಗೆ ಬದುಕಿನ ಎಲ್ಲ ಹಂತಗಳಲ್ಲಿ ಬಳಕೆಗೊಳ್ಳುವ ಉರ್ದು ಪದಗಳನ್ನು ಈ ಪ್ರಭೇದದಲ್ಲಿ ಗಮನಿಸಬಹುದು. ಇಲ್ಲಿ ಕೆಲವು ಉದಾಹರಣೆಗಳು:

ಉಡಾಸು, ಗುಜರಾಯಿಸು, ಉಂಗಲಿ, ಗರ್ದನ, ನಾಚಗಿ-ಶರ್ಮಾ, ದೇಖ್ ರೇಖ್, ಭೋಲಾ- ಭಾಲಾ, ಊಪರ ಶೇರವಾನಿ ಅಂದರ ಪರೇಶಾನಿ, ಚಾರ ಪತ್ಥರ ಚಾರ, ಹುಜೂರ, ಸಾಹೇಬ, ಹುಸ್ಯಾರ, ಖಬರದಾರ, ಠೀಕ್, ಬದಮಾಶ, ಹರಾಮ್, ನಾಲಾಯಕ್, ಸೈತಾನ್, ಬೇಶರ್ಮ, ಜುಲೂಸ, ಮಜಮಾ, ಹಂದಿ, ಉಸ್ತಾದ, ಹುಮ್ನಾಬಾದ್ ... ಇತ್ಯಾದಿ.

ಈ ರೀತಿ ವ್ಯಾಪಕವಾಗಿ ಉರ್ದು ಬಳಕೆ ಈ ಪ್ರಭೇದದಲ್ಲಿ ಇರುವುದರಿಂದ ಖ್, ಝ್, ಫ್, ಮುಂತಾದ ಧ್ವನಿಮಾಗಳು ಕನ್ನಡಕ್ಕೆ ಸೇರಿವೆ. ಈ ಪ್ರಭೇದಗಳಲ್ಲಿ ಉರ್ದುವಿನೊಡನೆ ಹಿಂದಿ ಪದಗಳೂ ತಮ್ಮ ಕಾಣಿಕೆ ಸಲ್ಲಿಸಿವೆ.

ಕರ್ನಾಟಕದ ಉತ್ತರಭಾಗದಲ್ಲಿ ಉರ್ದುಪ್ರಭಾವಿತ ಪ್ರಭೇದವನ್ನು ಬಿಟ್ಟರೆ ಮೈಸೂರು ಕೆಲವು ಕಾಲ ಟಿಪ್ಪುಸುಲ್ತಾನ್ ಮುಂತಾದ ಮುಸಲ್ಮಾನ್ ಅರಸರ ಆಳ್ವಿಕೆಗೆ ಒಳಪಟ್ಟಿದುದರಿಂದ ಬಹುಕಾಲದವರೆಗೆ ಮಹಮ್ಮದೀಯ ಅಧಿಕಾರಿಗಳು ಅಧಿಕಾರಸ್ಥಾನಗಳಲ್ಲಿದ್ದುದರಿಂದ ಮೈಸೂರು, ಕೊಡಗು, ಮಂಡ್ಯ ಮುಂತಾದ ಜಿಲ್ಲೆಗಳ ಸುತ್ತಮುತ್ತಲಿನ ಪ್ರದೇಶಗಳಲ್ಲಿಯೂ ಉರ್ದು ಪ್ರಭಾವ ಬೀರಿದೆ. ಆಡಳಿತಕ್ಕೆ ಸಂಬಂಧಿಸಿದ ಅನೇಕ ಪದಗಳು ಕನ್ನಡಕ್ಕೆ ಸೇರಿವೆ. ಆದರೂ ಬೀದರ, ಕಲಬುರ್ಗಿ, ಪ್ರದೇಶದಲ್ಲಿಯಷ್ಟು ದಟ್ಟವಾದ ಪ್ರಭಾವ ಅಲ್ಲಿ ಕಾಣುವುದಿಲ್ಲ. ಬೀದರ, ಕಲಬುರ್ಗಿ ಪ್ರದೇಶದಲ್ಲಿ ವಾಕ್ಯಮಟ್ಟದಲ್ಲೂ ಪ್ರಭಾವ ಗಮನಾರ್ಹವಾಗಿರುವುದು ವಿಶೇಷ.

"ನಾನು ನಿಮ್ಮೊಡನೆ ಬರುತ್ತೇನೆ ಎಂದು ಅವನು ಅಂದನು".

ಈ ಬಗೆಯ ಕನ್ನಡ ವಾಕ್ಯಗಳು ಉರ್ದುವಿನ ಪ್ರಭಾವದಿಂದ ತಿರುವುಮುರುವಾಗಿವೆ :

ಉದಾ : ೧. 'ಅಂವಾ ಅಂದಾ ಕಿ ನಾಭೀ ನಿಮ್ ಸರಿ ಬರ್ತೆ'.
(ಅವನು ಅಂದನಲ್ಲಾ ಏನಂದರೆ ನಾನೂ ಕೂಡ ನಿಮ್ಮೊಡನೆ ಬರುತ್ತೇನೆ)

೨. 'ದುನಿಯಾದ ಮಂದಿ ಹೇಳ್ತಾರಕಿ ಅಂವಾ ಥೋಲ್ ಚಂದ ಹಾನ'
(ಬಹಳಷ್ಟು ಜನ ಹೇಳುತ್ತಾರಲ್ಲಾ ಏನಂದರೆ ಅವನು ಬಹಳ ಚಲುವನಿದ್ದಾನೆ)

ಕನ್ನಡದ ಕ್ರಿಯಾಧಾತುಗಳನ್ನು ಉರ್ದು ಪದಗಳಿಗೆ ಹತ್ತಿಸಿ ವಾಕ್ಯ ರಚಿಸುವ ವೈಶಿಷ್ಟ್ಯವನ್ನು ಈ ಪ್ರಭೇದದಲ್ಲಿ ಕಾಣಬಹುದಾಗಿದೆ ; ಖ್ಯಾಲಮಾಡು, ಸಫರ್ ಮಾಡು, ಖತಲ್‌ಮಾಡು, ಖೂನಹತ್ತು, ಖರಾಬ್‌ಮಾಡು. ಕ್ರಿಯಾವಿಶೇಷಣ ಹಾಗೂ ವಿಶೇಷಣಗಳಿಂದ ಒಡಗೂಡಿದ ಅನೇಕ ಪದಗಳಲ್ಲಿ ಉರ್ದು ಕನ್ನಡ ಪದಗಳು ಸಮ್ಮಿಶ್ರಗೊಂಡು ಬಳಕೆಗೊಳ್ಳುವುದಂತೂ ವಿಪುಲವಾಗಿ ಕಂಡುಬರುತ್ತದೆ. ಕಿರಾಯ್ದ ಮನಿ,

ಖುದ್ದ (ಖಾಸ) ಊರು, ಜವಾನ ಹುಡುಗ, ಮುಷ್ಕಿಲ್ ಕೆಲ್ಸ, ಹೀಗೆಯೆ ಪದೋತ್ತರ ಹಾಗೂ ಪದಪೂರ್ವ ಉರ್ದು ಪದಗಳಿಂದೊಡಗೂಡಿದ ಕನ್ನಡ ರೂಪಗಳೂ ಹೇರಳವಾಗಿ ದೊರಯುತ್ತವೆ. ಸಿರ್ಫ್ ಒಂದು, ಹರ ಮಾತು, ಅವನವಾಸ್ತಾ, ತಾನುಭೀ ಇತ್ಯಾದಿ. ಉರ್ದುಪ್ರಭಾವಿತ ಪ್ರಭೇದದಲ್ಲಿ ಉರ್ದು ಷಷ್ಠಿ ವಿಭಕ್ತಿ ಪ್ರತ್ಯಯ ನೇರವಾಗಿ ಎತ್ತಿಕೊಳ್ಳಲ್ಪಟ್ಟಿದ್ದರೆ, ಚತುರ್ಥಿ ವಿಭಕ್ತಿಪ್ರತ್ಯಯವೇ ದ್ವಿತೀಯಾರ್ಥದಲ್ಲೂ ಬಳಕೆಯಾಗುತ್ತದೆ:

'ಘರಬರ ಕಾ ಮಂದಿ', 'ರಾಮಗ ಹೊಡಿ'.

ಇಷ್ಟೆಲ್ಲ ಬಗೆಯಲ್ಲಿ ಉರ್ದು ಪ್ರಭಾವ ಗಾಢವಾಗಿದ್ದರೂ ಈ ಭಾಗದಲ್ಲಿ ಅಚ್ಚಗನ್ನಡದ ಹಲವಾರು ಪದಗಳೂ ದೊರೆಯುತ್ತವೆಯನ್ನುವುದನ್ನು ಮರೆಯಲಾಗದು.

**ಮರಾಠಿ ಪ್ರಭಾವಿತ ಪ್ರಭೇಧ :**

ಬೆಳಗಾವಿ ಜಿಲ್ಲೆಯ ಖಾನಾಪುರ, ಬೆಳಗಾವಿ, ಹುಕ್ಕೇರಿ, ಚಿಕ್ಕೋಡಿ, ರಾಯಬಾಗ ಹಾಗೂ ಅಥಣಿ- ಈ ತಾಲೂಕುಗಳಲ್ಲಿ, ವಿಜಾಪುರ ಜಿಲ್ಲೆಯ ಜಮಖಂಡಿ ಹಾಗೂ ವಿಜಾಪುರ ತಾಲೂಕುಗಳ ಉತ್ತರಭಾಗ ಇಂಡಿ ತಾಲೂಕು; ಕಲಬುರ್ಗಿ ಜಿಲ್ಲೆಯ ಅಫಜಲಪುರ, ಆಳಂದ, ತಾಲೂಕಗಳು; ಬೀದರ ಜಿಲ್ಲೆಯ ಬಸವಕಲ್ಯಾಣ, ಭಾಲ್ಕಿ, ಔರಾದ ತಾಲೂಕುಗಳು ಹಾಗೂ ಕಾರವಾರ ಜಿಲ್ಲೆಯ ಸೂಪಾ ತಾಲೂಕು ಇಷ್ಟು ಪ್ರದೇಶ ಈ ಪ್ರಭೇದದಲ್ಲಿ ಸಾಮಾನ್ಯವಾಗಿ ಒಳಗೊಳ್ಳುತ್ತದೆ. ಐದು ಜಿಲ್ಲೆಗಳ ಗಡಿಪ್ರದೇಶವೆಲ್ಲ ಮರಾಠಿ ಪ್ರದೇಶಕ್ಕೆ ಹೊಂದಿಕೊಂಡಿದೆ. ಆದರೆ ಎಲ್ಲಾ ಪ್ರದೇಶದಲ್ಲಿಯೂ ಪ್ರಭಾವ ಒಂದೇ ತೆರನಾಗಿಲ್ಲ. ಬೆಳಗಾವಿ ಜಿಲ್ಲೆಯ ಪಶ್ಚಿಮ ಹಾಗೂ ಉತ್ತರ ಗಡಿಭಾಗಗಳಲ್ಲಿ, ಕಾರವಾರ ಜಿಲ್ಲೆಯ ಸೂಪಾ ತಾಲೂಕಿನಲ್ಲಿ ಮರಾಠಿ ಮಾತನಾಡುವವರ ಸಂಖ್ಯೆಯೂ ಗಮನಾರ್ಹವಾಗಿದೆ. ಮಾಂವಸಿ, ಪಾವಣ್ಯಾ, ಅಬಚಿ, ವೈನಿ, ಅಗಾವ್, ಫಾರಚಾಂಗ್ಲ, ಧಡಧಡೀತ, ಗರ್ದಿ, ಜರಾ, ಜರ್, ಹರಕತ್, ಝುಕಾಸ, ಬಾತ್ಮಿ, ಅಮುಟಿ, ಲಗುಟ, ತಾಬಡತೋಬ, ದಗದ, ಶ್ಯಾಯಿ, ವಹಿ, ಪಾರ, ಪೋರಿ, ವರಾತ್, ಅಟಾಪ, ಹಳು-ಹಳು, ಝುಣಕ್, ಅಗದೀ, ರಗಡ, ಠಿಕಾಣಿ, ಖರೆ, ಖಿಚಡಿ-ಈ ರೀತಿ ಹೇರಳ ಪದಗಳು ಈ ಪ್ರಭೇದದಲ್ಲಿ ತುಂಬಿ ಕೊಂಡಿವೆ.

ಮರಾಠಿ ಪ್ರಭಾವಿತ ಪ್ರಭೇದದಲ್ಲಿ ಶಬ್ದಾದಿಯಲ್ಲಿ ಮಹಾಪ್ರಾಣ ಉಚ್ಚಾರ ಸಾಕಷ್ಟು ಕಂಡು ಬರುತ್ತದೆ.

ಖರೆ, ಝಿಪ್ಪರಿ, ಭಗಿಭಗಿ, ಥಾ.

ಪದಗಳಲ್ಲದೆ ಪದಸಮುಚ್ಚಯಗಳೂ ಇದ್ದುದಿದ್ದಂತೆ ಕನ್ನಡಿಗರಿಂದ ಉಚ್ಚರಿಸಲ್ಪಡುತ್ತವೆ :

ಕಮೀತಕಮಿ, ಫಾರ ನಾಜೂಕ

ಉರ್ದು ಪ್ರಭಾವಿತ ಪ್ರಭೇದದಲ್ಲಿಯಂತೆ ಮರಾಠಿ ಪ್ರಭಾವಿತ ಪ್ರಭೇದದಲ್ಲಿಯೂ ಎಲ್ಲ ಸಾಮಾಜಿಕ, ರಾಜಕೀಯ, ಧಾರ್ಮಿಕ ವ್ಯವಹಾರಗಳಿಗೆ ಸಂಬಂಧಿಸಿದ ಲೆಕ್ಕವಿಲ್ಲದಷ್ಟು ಮರಾಠಿ ಪದಗಳು ಬಳಕೆಯಲ್ಲಿವೆ. ಸಂಖ್ಯಾವಾಚಕ, ಪ್ರಮಾಣ ವಾಚಕಗಳಂತೂ ಈ ಭಾಗದಲ್ಲಿ ಬಹು ಬಳಕೆಯ ಪದಗಳಾಗಿವೆ. ಪೌಣೆ, ದೀಡ, ಸವ್ವಾ, ಅಡೀಚ, ಪಾವ್, ಏಕಸೆ, ದೋನಸೆ, ಶಂಬರ್, ಪನ್ನಾಸ, ವೀಸ, ಬಾರಾ, ಪಯಿಲಾ.

ದ್ವಿತೀಯಾ ವಿಭಕ್ತಿ ಪ್ರತ್ಯಯ ಉಪಯೋಗಿಸದೆ ವಾಕ್ಯ ರಚಿಸುವ ಹಾಗೂ ಕೆಲವೆಡೆ ಅದರ ಬದಲಾಗಿ ಚತುರ್ಥಿ ವಿಭಕ್ತಿ ಪ್ರತ್ಯಯ ಪ್ರಯೋಗಿಸಿ ವಾಕ್ಯ ರಚಿಸುವ ವಾಡಿಕೆ ಈ ಪ್ರಭೇದದಲ್ಲಿದೆ. ಉದಾ : ಅವನಿಗೆ ಒಳಖಾಸ, ಹಣ್ಣಿಗೆ ಕಡಿ, ಅವಕ ನೋಡ್ದ. ಈ ಬಗೆಯ ರಚನೆ ಕಲಬುರ್ಗಿ, ಬೀದರ, ಜಿಲ್ಲೆಯ ಮರಾಠಿ ಪ್ರಭಾವಿತ ಪ್ರಭೇದಗಳಲ್ಲಿ ಹೆಚ್ಚಾಗಿದೆ. ಆದ್ದರಿಂದ ಉರ್ದು ಹಾಗೂ ಮರಾಠಿ ಎರಡೂ ಭಾಷೆಗಳ ಪ್ರಭಾವಕ್ಕೊಳಗಾದ ಕಲಬುರ್ಗಿ, ಬೀದರ, ಜಿಲ್ಲೆಯ ಗಡಿ ತಾಲೂಕುಗಳ ಪ್ರದೇಶವನ್ನು ಬೇರೆಯಾಗಿ ಗುರುತಿಸಬಹುದಾಗಿದೆ. ಇಸು ಪ್ರೇರಣಾರ್ಥಕ ಪ್ರತ್ಯಯವನ್ನು ಮರಾಠಿ ಪದಗಳಿಗೆ ಸೇರಿಸಿ ಕನ್ನಡದಲ್ಲಿ

ಬಳಸುವ ರೂಢಿ ಈ ಪ್ರಭೇದದಲ್ಲಿಯೂ ಕಾಣುತ್ತದೆ. ವಾಚಾಸು (ಮಾತಾಡಿಸು) ಲಾಜಾಸು (ನಾಚಿಸು) ಪಿಂಗಾಳ್ಸು (ತೂಕಡಿಸು), ಹರಾಸ (ಸೋಲಿಸು) ಚಿಡಾಸ (ಸತಾಯಿಸು).

ಸ್ಥಳನಾಮಗಳ ಮೇಲೆ ಪ್ರಭಾವ ಅಷ್ಟಾಗಿ ಇಲ್ಲ. ಮರಾಠಿ ಪ್ರಭಾವದಿಂದಾಗಿ ಈ ಪ್ರಭೇದದಲ್ಲಿ ಕೆಲವು ಕನ್ನಡ ಶಬ್ದಗಳ ಉಚ್ಚಾರದಲ್ಲಿ ಬದಲಾವಣೆಯುಂಟಾಗಿರುವುದನ್ನೂ ಗಮನಿಸಬಹುದು :

ಬೈಂದಾನ (ಬಂದಿದ್ದಾನೆ), ಹೊಂದ (ಹೌದು), ಹೊಯಂದಾನ(ಹೋಗಿದ್ದಾನೆ), ಯಾನು(ಏನು)

ಮರಾಠಾ ಸಂಸ್ಥಾನಿಕರು ಧಾರವಾಡ, ಬೆಳಗಾವಿ, ವಿಜಾಪುರ ಜಿಲ್ಲೆಗಳ ಅನೇಕ ಭಾಗಗಳನ್ನು ಅಲ್ಲಲ್ಲಿ ಸ್ಥಳೀಯವಾಗಿ ಬಹುಕಾಲದವರೆಗೆ ಆಳಿದರೂ ತಮ್ಮ ಭಾಷೆಯ ಪ್ರಭಾವವನ್ನು ಅವರು ಗಡಿಭಾಗಗಳನ್ನುಳಿದು ಬೀರಲು ಸಾಧ್ಯವಾಗಲಿಲ್ಲ. ಮರಾಠಿ ಅರಸರ ಪ್ರಭಾವದಿಂದಾಗಿ ಲೆಕ್ಕಪತ್ರಗಳನ್ನು ಸಾಮಾನ್ಯ ವ್ಯಾಪಾರಸ್ಥರೂ ಮರಾಠಿ ಇಲ್ಲವೆ ಮೋಡಿ ಲಿಪಿಯಲ್ಲಿಡುತ್ತಿದ್ದುದು ಇತ್ತೀಚಿನವರೆಗೂ ಪ್ರಚಲಿತವಾಗಿತ್ತು.

**ತೆಲುಗು ಪ್ರಭಾವಿತ ಪ್ರಭೇದ :**

ಕನ್ನಡದ ಮೇಲೆ ಉರ್ದು ಹಾಗೂ ಮರಾಠಿ ಭಾಷೆಗಳು ಬೀರಿದಷ್ಟು ವ್ಯಾಪಕವಾದ ಪ್ರಭಾವವನ್ನು ತೆಲುಗು ಬೀರಿಲ್ಲ. ತಮಿಳಿನದಂತೂ ಇನ್ನೂ ಕಡಿಮೆ. ಆದರೂ ತೆಲುಗು ಪ್ರಭಾವಿತ ಪ್ರಭೇದವನ್ನು ಗುರುತಿಸುವಷ್ಟು ಪ್ರದೇಶ ಕನ್ನಡದಲ್ಲಿ ದೊರೆಯುತ್ತದೆ. ಬೀದರ, ಕಲಬುರ್ಗಿ, ರಾಯಚೂರು, ಬಳ್ಳಾರಿ, ಚಿತ್ರದುರ್ಗ, ತುಮಕೂರು, ಹಾಗೂ ಕೋಲಾರ ಜಿಲ್ಲೆಗಳ ಪೂರ್ವ ಭಾಗವೆಲ್ಲ ಆಂಧ್ರ ಪ್ರದೇಶಕ್ಕೆ ಹತ್ತಿಕೊಂಡಿರುವುದರಿಂದ ಬೀದರ ಜಿಲ್ಲೆಯ ಔರಾದ, ಬೀದರ ತಾಲೂಕುಗಳು ; ಕಲಬುರ್ಗಿ ಜಿಲ್ಲೆಯ ಚಿಂಚೋಳಿ, ಸೇಡಂ ಹಾಗೂ ಯಾದಗಿರಿ ತಾಲೂಕುಗಳು ; ರಾಯಚೂರು ಜಿಲ್ಲೆಯ ರಾಯಚೂರು ತಾಲೂಕು, ಬಳ್ಳಾರಿ ಜಿಲ್ಲೆಯ ಸಿರಗುಪ್ಪ ಹಾಗೂ ಬಳ್ಳಾರಿ ತಾಲೂಕುಗಳು ; ಚಿತ್ರದುರ್ಗ ಜಿಲ್ಲೆಯ ಮೊಳ- ಕಾಲ್ಮೂರು, ಚಳ್ಳಕೆರೆ, ತಾಲೂಕುಗಳು ; ತುಮಕೂರು ಜಿಲ್ಲೆಯ ಸಿರಾ, ಪಾವಗಡ ಹಾಗೂ ಮಧುಗಿರಿ ತಾಲೂಕುಗಳು ; ಕೋಲಾರ ಜಿಲ್ಲೆಯ ಬಾಗೇಪಲ್ಲಿ, ಚಿಂತಾಮಣಿ, ಶ್ರೀನಿವಾಸಪುರ, ಮುಳಬಾಗಿಲು ಹಾಗೂ ಬಂಗಾರಪೇಟೆ ತಾಲೂಕುಗಳ ಪ್ರದೇಶದಲ್ಲಿ ತೆಲುಗು ಪ್ರಭಾವ ಒಂದೇ ಮಟ್ಟದಲ್ಲಾಗಿಲ್ಲ. ಆಯಾ ಜಿಲ್ಲಾ ಪ್ರಭೇದಗಳಿಗನುಗುಣವಾಗಿ, ಭೌಗೋಲಿಕ, ರಾಜಕೀಯ, ಸಾಮಾಜಿಕ ಕಾರಣಗಳಿಂದ ಪ್ರಭಾವ ಹೆಚ್ಚು ಕಡಿಮೆಯಾಗಿದೆ. ಸಂಪೂರ್ಣ ಪಾವಗಡ ತಾಲೂಕು ಇದಕ್ಕೆ ತಕ್ಕ ಉದಾಹರಣೆಯಾಗಬಲ್ಲದು. ಇಡೀ ತಾಲೂಕು ಆಂಧ್ರ ನಾಡಿನಲ್ಲೇ ವಿಸ್ತರಿಸಿದೆ. ಜಿಲ್ಲಾ ಸ್ಥಳದಿಂದ ಈ ತಾಲೂಕಿಗೆ ಪ್ರವೇಶಿಸಬೇಕಾದರೆ ಆಂಧ್ರ ನಾಡಿನಲ್ಲಿ ದಾಟಲೇ ಬೇಕಾಗುತ್ತದೆ. ಆದ್ದರಿಂದ ಭೌಗೋಲಿಕವಾಗಿ ಬಹು ವಿಚಿತ್ರ ಪರಿಸರದಲ್ಲಿ ಈ ತಾಲೂಕಿದೆ. ನಾಲ್ಕೂ ದಿಕ್ಕಿಗಿರುವ ತೆಲುಗು ಪರಿಸರದಲ್ಲಿ ಕನ್ನಡದ ಈ ಪ್ರದೇಶ ನೆಲೆಸಿದೆ. ಅಂತೆಯೇ ಅತಿ ಹೆಚ್ಚು ತೆಲುಗು ಪ್ರಭಾವಿತ ಪ್ರದೇಶವೆಂದರೆ ಪಾವಗಡ ತಾಲೂಕು. ಇಲ್ಲಿರುವ ಪ್ರತಿಯೊಬ್ಬ ಕನ್ನಡಿಗನಿಗೂ ತೆಲುಗು ಬರುತ್ತದೆ. ವಿಪರೀತ ತೆಲುಗು ಮಿಶ್ರಿತ ಕನ್ನಡ, ಒಂದು ಉಪಭಾಷೆಯಾಗುವಷ್ಟರ ಮಟ್ಟಿಗೆ ವಿಶಿಷ್ಟ- ವೆನಿಸುತ್ತದೆ. ಇಲ್ಲಿಯ ಕನ್ನಡಿಗರು ತೆಲುಗು ಶಬ್ದಗಳನ್ನು ಬೇಕಾದ ಹಾಗೆ ಕನ್ನಡದಲ್ಲಿ ಬೆರಸಿ ಮಾತ- ನಾಡುತ್ತಾರೆ.

ಗೂರ್ರೊಡೆಯೋದು (ಗೋರು ಹೊಡೆಯುವುದು)

ನೆಗಡಾಯಿಂದ (ನೆಗಡಿ ಆಗಿದೆ)

ಕೊದಲು ದುಬ್ಬಾರಾ (ಕೂದಲು ಬಾಚಿಕೊಂಡು ಬಾ)

ಗಾಡಿದಿ (ಕತ್ತೆ); ನೀಳ್ಳು (ನೀರು), ಪಾಂಬು (ಹಾವು), ಸೀಳಕುಟ್ರಿ (ಕಟ್ಟಿರುವೆ), ಶಿಲ್ಕೋಲ್ (ಬಾರುಕೋಲು) ಇತ್ಯಾದಿ ಅಸಂಖ್ಯ ತೆಲುಗು ಪದಪುಂಜಗಳು, ವಾಕ್ಯಗಳು ಈ ಪ್ರಭೇದದಲ್ಲಿ ಬಳಕೆಯಲ್ಲಿವೆ.

ಪಾವಗಡ ಬಿಟ್ಟರೆ ತುಮಕೂರು ಜಿಲ್ಲೆಯ ಸಿರಾ ಮತ್ತು ಮಧುಗಿರಿ ಪ್ರದೇಶಗಳಲ್ಲಿ ತೆಲುಗು ಪ್ರಭಾವ ಕಂಡುಬರುತ್ತದೆ. ಮಧುಗಿರಿಗೆ ಹೊಂದಿಕೊಂಡೇ ಇರುವ ಕೋಲಾರ ಜಿಲ್ಲೆಯ ಗೌರಿಬಿದನೂರು ತಾಲೂಕು ಹಾಗೂ ಆಂಧ್ರಗಡಿಗೆ ಹೊಂದಿಕೊಂಡಿರುವ ಕೋಲಾರ ಜಿಲ್ಲೆಯ ಎಲ್ಲ ತಾಲೂಕು ಪ್ರದೇಶಗಳಲ್ಲೂ ತೆಲುಗು ಪ್ರಭಾವ ಸಾಕಷ್ಟಿದೆ. ಕನ್ನಡ ಆಡಳಿತ ಭಾಷೆಯಾಗಿರುವುದರಿಂದ ಎಷ್ಟು ಬೇಕು ಅಷ್ಟು ಕನ್ನಡ ಮಾತನಾಡಿದರೂ ವ್ಯವಹಾರಕ್ಕಾಗಿ ಹೆಚ್ಚಾಗಿ ತೆಲುಗಿನಲ್ಲಿ ಮಾತನಾಡುತ್ತಾರೆ.

ಈ ಭಾಗದಲ್ಲಿ ಚದುವು (ಓದು), ರಾಗಿಮ್ರಾನು (ಅರಳಿ ಮರ), ಅಗ್ಗಿ (ಬೆಂಕಿ), ಒಜ್ (ಅಧ್ಯಾಪಕ), ಕೋಯಿಲ್‌ಗುಡಿ (ಚರ್ಚ), ಎರಗಡ್ಡೆ (ಈರುಳ್ಳಿ) ಮುಂತಾದ ಅಸಂಖ್ಯ ತೆಲುಗು ಪದಗಳು ಬಳಕೆಯಲ್ಲಿವೆ.

ಕೋಲಾರ ಜಿಲ್ಲೆಯ ಮಾಲೂರು, ಬಂಗಾರಪೇಟೆ, ತಾಲೂಕುಗಳು ಬೆಂಗಳೂರಿಗೆ ತೀರ ಸನಿಹದಲ್ಲಿರುವುದಲ್ಲದೆ ಸಂಪರ್ಕ-ಸಾಧನದ ಹೆಚ್ಚಿನ ಅನುಕೂಲತೆ ಇರುವುದರಿಂದ ಬೆಂಗಳೂರು ಜಿಲ್ಲೆಯ ಹೊಸಕೋಟೆ ತಾಲೂಕಿನ ದಕ್ಷಿಣಭಾಗ, ಆನೆಕಲ್ ತಾಲೂಕು ಹಾಗೂ ದಕ್ಷಿಣ ಬೆಂಗಳೂರು ಈ ಪ್ರದೇಶಗಳಲ್ಲಿ ತೆಲುಗು ಪ್ರಭಾವವೇ ಹೆಚ್ಚಿಗಿದೆ. ಬೆಂಗಳೂರು ಜಿಲ್ಲೆಯ ದಕ್ಷಿಣಗಡಿ, ತಮಿಳನಾಡಿಗೆ ಹೊಂದಿ ಇದ್ದರೂ ತಮಿಳನಾಡಿನ ಹೊಸೂರು ತಾಲೂಕಿನ ಪ್ರದೇಶದಲ್ಲೂ ತೆಲುಗಿನ ಪ್ರಭಾವವೇ ಇದೆ. ಬೆಂಗಳೂರು ಜಿಲ್ಲೆಯಲ್ಲಿ ತಮಿಳಿಗಿಂತ ತೆಲುಗು ಭಾಷೆಯ ಪ್ರಭಾವವೇ ಹೆಚ್ಚಿರುವುದು ಗಮನಾರ್ಹವಾಗಿದೆ. ಬೆಂಗಳೂರು ಜಿಲ್ಲೆಯ ಉತ್ತರದಿಕ್ಕಿನಲ್ಲಿರುವ ದೊಡ್ಡಬಳ್ಳಾಪುರ, ದೇವನಹಳ್ಳಿ ತಾಲೂಕುಗಳಲ್ಲಿಯೂ ತೆಲುಗು ಪ್ರಭಾವ ಕಂಡುಬರುತ್ತದೆ. ಆದ್ದರಿಂದ ಬೆಂಗಳೂರು ಜಿಲ್ಲೆಯ ಪಶ್ಚಿಮ ತಾಲೂಕುಗಳಾದ ನೆಲಮಂಗಲ, ಮಾಗಡಿ, ರಾಮನಗರ, ಚನ್ನಪಟ್ಟಣ, ಹಾಗೂ ಕನಕಪುರ ತಾಲೂಕಿನ ಪಶ್ಚಿಮಭಾಗ - ಇವು ತೆಲುಗು ಪ್ರಭಾವದಿಂದ ದೂರವಿರುವ ಪ್ರದೇಶಗಳೆನ್ನಬಹುದು.

ಅಳ್ಳುವ ಅಥವಾ ಉತ್ತೆ (ಅಳಿಲು), ಊನಿ ಅಥವಾ ಶೀಬಿ (ಬೆಕ್ಕು), ಕಡಾಣಿ (ಕೀಲು), ಸೀಮ (ಇರುವೆ), ಪಾಪ್ಡಿ (ಬೈತಲೆ), ಗುಡ್ಡೋನು (ಕುರುಡನು), ಚೌಟ್ಲು ಅಥವಾ ಶೌಟ್ಲು (ಕಿವುಡ) ಇಂತಹ ಹಲವಾರು ಪದಗಳು ಈ ಪ್ರದೇಶದಲ್ಲಿ ತೆಲುಗಿನಿಂದ ಸ್ವೀಕರಿಸಲ್ಪಟ್ಟಿವೆ.

ಚಿತ್ರದುರ್ಗ ಜಿಲ್ಲೆಯಲ್ಲಿ ವೇದಾವತಿ ನದಿಯ ಪೂರ್ವಭಾಗ ತೆಲುಗು ಪ್ರಭಾವಿತ ಪ್ರದೇಶ. ಮೊಳಕಾಲ್ಮೂರು, ಚಳ್ಳಕೆರೆ, ಹಾಗೂ ಹಿರಿಯೂರು ತಾಲೂಕಿನ ಪೂರ್ವ ಭಾಗ - ಈ ಪ್ರದೇಶದಲ್ಲಿ ತೆಲುಗು ಮಾತನಾಡುವವರ ಸಂಖ್ಯೆ ಗಮನಾರ್ಹವಾಗಿರುವುದರಿಂದ ಸಹಜವಾಗಿ ಆ ಭಾಷೆಯ ಹಲವಾರು ಪದಗಳು ಕನ್ನಡದಲ್ಲಿ ಸೇರಿವೆ. ಬಳ್ಳಾರಿ ಜಿಲ್ಲೆಯ ಬಳ್ಳಾರಿ ತಾಲೂಕು ಹಾಗೂ ಸಿರಗುಪ್ಪ ತಾಲೂಕು ಸಂಪೂರ್ಣವಾಗಿ ತೆಲುಗು ಪ್ರಭಾವಕ್ಕೊಳಪಟ್ಟಿವೆ. ಆಂಧ್ರದ ಜನತೆಯೊಡನೆ ಬಹುಕಾಲದಿಂದ ಇವರ ಸಂಪರ್ಕ ಇದ್ದುದರಿಂದ ಈ ಪ್ರದೇಶದಲ್ಲಿ ಸಾಕಷ್ಟು ಜನ ತೆಲುಗರು ನೆಲಸಿದ್ದಾರೆ. ಒಕ ರೂಪಾಯಿ, ಒಕಟಿ, ಬೇಯಿ, ಪೋ, ಚೂಡು, ಡಬ್ಬು, ದೊಂಗಲು, ಚಪ್ಪು, ಪಾಮು ಇಂತಹ ಬಹುಸಂಖ್ಯ ತೆಲುಗು ಪದಗಳು ಕನ್ನಡದಲ್ಲಿ ಸೇರಿವೆ.

ರಾಯಚೂರು, ಬೀದರ ಹಾಗೂ ಕಲಬುರ್ಗಿ ಜಿಲ್ಲೆಯ ಪೂರ್ವ ಗಡಿಭಾಗದಲ್ಲಿ ತೆಲುಗು ಪ್ರಭಾವವಿದ್ದರೂ ಕೋಲಾರ, ಬೆಂಗಳೂರು ಜಿಲ್ಲೆಯ ಪ್ರದೇಶಗಳಲ್ಲಿದ್ದಷ್ಟು ದಟ್ಟವಾಗಿಲ್ಲ. ಆದ್ದರಿಂದ ತೆಲುಗು ಪ್ರಭಾವಿತ ಕನ್ನಡ ಪ್ರಭೇದವನ್ನು

೧. ಹೆಚ್ಚು ದಟ್ಟ ಪ್ರಭಾವುಳ್ಳ ಪಾವಗಡ, ಮಧುಗಿರಿ, ಕೋಲಾರ ಪ್ರದೇಶಗಳು
೨. ಕಡಿಮೆ ಪ್ರಭಾವವುಳ್ಳ ಬೀದರ, ಕಲಬುರ್ಗಿ, ರಾಯಚೂರು ಪ್ರದೇಶಗಳು
೩. ಮಧ್ಯಮ ಪ್ರಭಾವವುಳ್ಳ ಬಳ್ಳಾರಿ, ಚಿತ್ರದುರ್ಗ, ಪ್ರದೇಶಗಳು ಎಂಬ ಮೂರು ಮಟ್ಟಗಳಲ್ಲಿ ಗುರುತಿಸಬಹುದು.

**ಮಲೆಯಾಳಂ - ತುಳು ಪ್ರಭಾವಿತ ಪ್ರದೇಶ :**

ಉತ್ತರ ಕನ್ನಡ, ದಕ್ಷಿಣ ಕನ್ನಡ ಹಾಗೂ ಕೊಡಗು ಈ ಎರಡು ಜಿಲ್ಲೆಗಳಲ್ಲಿ ಈ ಪ್ರಭೇದವನ್ನು ಕಾಣಬಹುದು. ವಾಸ್ತವವಾಗಿ ಮಲಯಾಳಂ ಪ್ರಭಾಪಿತ ಪ್ರಭೇದ ಹಾಗೂ ತುಳು ಪ್ರಭಾಪಿತ ಪ್ರಭೇದ ಇವೆರಡನ್ನೂ ಪ್ರತ್ಯೇಕವಾಗಿಯೇ ಪರಿಗಣಿಸಬೇಕಾಗುತ್ತದೆ. ಈ ಪ್ರಭೇದಗಳನ್ನು ಪಶ್ಚಿಮಘಟ್ಟದ ಪಶ್ಚಿಮ ಭಾಗದಲ್ಲಿ ಕಡಲತೀರ ಪ್ರದೇಶ ಹಾಗೂ ಕೇರಳ ರಾಜ್ಯ ಗಡಿಗೆ ಹತ್ತಿರುವ ಪ್ರದೇಶದಲ್ಲಿ ಸ್ಪಷ್ಟವಾಗಿ ಗುರುತಿಸಬಹುದು. ಈ ಪ್ರದೇಶದ ಕನ್ನಡದ ಮೇಲೆ ಕೊಂಕಣಿ, ತುಳು ಹಾಗೂ ಮಲೆಯಾಳಂ ಭಾಷೆಗಳ ಪ್ರಭಾವವಾಗಿದೆ. ಉತ್ತರ ಕನ್ನಡ ಜಿಲ್ಲೆಯಲ್ಲಿ ಕೊಂಕಣಿ ಹಾಗೂ ತುಳು ಹೆಚ್ಚು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ತುಳು ಹಾಗೂ ಮಲೆಯಾಳಂ ಹೆಚ್ಚು. ಕೊಂಕಣಿ ಭಾಷೆಯನ್ನು ಚಿತ್ಪಾವನ ಹಾಗೂ ಕರ್ಹಾಡಸ್ಥ ಮರಾಠರು ಮಾತನಾಡುವುದರಿಂದ ಇದು ವಿಶಿಷ್ಟ ಜನಾಂಗದವರ ಭಾಷೆ ಮಾತ್ರ. ಅಂತೆಯೇ ಕೊಂಕಣಿಗಿಂತ ತುಳು ಭಾಷೆಯ ಪ್ರಭಾವವೇ ಒಡೆದು ಕಾಣುತ್ತದೆ. ಕಲ್ಯಾಣಿಪುರದ ದಕ್ಷಿಣಭಾಗದಲ್ಲಿ ತುಳು ಹೆಚ್ಚು ಬಳಕೆಗೊಳ್ಳುತ್ತಿದೆ. ಈ ಪ್ರದೇಶದಲ್ಲಿ ಗೌಡ ಹಾಗೂ ಹವ್ಯಕ ಜನಾಂಗದವರನ್ನುಳಿದು ಎಲ್ಲ ಜನರ ಮಾತೃಭಾಷೆ ತುಳು ಆಗಿರುವುದರಿಂದ ಅವರ ವ್ಯಾವಹಾರಿಕ ಕನ್ನಡದಲ್ಲಿ ತುಳುವಿನ ಪ್ರಭಾವ ಹೆಚ್ಚು ಸ್ಪಷ್ಟವಾಗಿರುತ್ತದೆ.

ತುಳು ಪ್ರಭಾವಿತ ಪ್ರಭೇದದಲ್ಲಿ, ಪುಚ್ಚೆ (ಬೆಕ್ಕು), ಪಿಜನ್ (ಇರುವೆ), ಉರೆ (ಚಿಗರೆ), ಇತ್ಯಾದಿ ಹಲವಾರು ತುಳು ಶಬ್ದಗಳು ಪ್ರವೇಶ ಪಡೆದಿರುವುದಲ್ಲದೆ ಕೆಲವು ಧ್ವನಿಮಾತ್ಮಕ ಬದಲಾವಣೆಗಳಿಗೂ ಅವಕಾಶವಾಗಿದೆ. ಈ ಪ್ರಭೇದದಲ್ಲಿ ಶಬ್ದಾಂತ್ಯದಲ್ಲಿ ಅನುನಾಸಿಕತೆ, ತುಳು ಪ್ರಭಾವದಿಂದ ಬಂದಿರಬೇಕು.

ಉದಾ : ಅಕ್ಕನ್, ಅಜ್ಜನ್, ಅಳಿಯನ್, ಹೆಗ್ಗನ್, ಪೆಗಲನ್, ನಾಯೆನ್, ಕಲ್ಲೂವನ್ ಇತ್ಯಾದಿ.

ಈ ಪ್ರಭೇದದಲ್ಲಿ 'ಞ' 'ಜ' ವರ್ಣಗಳು ಸ್ವತಂತ್ರವಾಗಿ ಬಳಕೆಗೊಳ್ಳುತ್ತವೆ.

ಞಗ್ಗು (ಜಗ್ಗು), ಒಜ್ಜ (ತೊಂದರೆ), ಕೂಞ್ಞ (ತೊದಲು), ಮಜ್ಜ (ಮಗ), ನೊಜ್ಜ (ನೊಗ),

ಹಞ್ಞ (ಸ್ವಲ್ಪ)

ಇ > ಎ, ಉ > ಒ ಬದಲಾವಣೆಯನ್ನು ಗಮನಿಸಬಹುದು :

ಕೆಮಿ < ಕಿವಿ, ಎಲಿ < ಇಲಿ, ಬೆಳಿ < ಬಿಳಿ, ಸೆಡ್ಲು < ಸಿಡಿಲು, ಸೂರು < ಸುರಿ,

ಒಳಿ < ಉಳಿ, ಕೂಣಿ < ಕುಣಿ, ತೊಟಿ < ತುಟಿ.

ಮಂಗಳೂರು, ಪುತ್ತೂರು ತಾಲೂಕುಗಳಲ್ಲಿ ಹಾಗೂ ಕೊಡಗಿನ ಭಾಗಮಂಡಲ ತಾಲೂಕಿನಲ್ಲಿ ಮಲೆಯಾಳಂ ಹೆಚ್ಚಿದೆ. ಮಾಪಿಳ್ಳೆ ಜನಾಂಗದವರ ಮಾತೃಭಾಷೆ ಮಲೆಯಾಳಂ ಆಗಿದ್ದು ಅವರ ಭಾಷೆಯ ಪ್ರಭಾವ ಇಲ್ಲಿ ಕಾಣುತ್ತದೆ. ಕೇರಳದ ಕಾಸರಗೋಡಿನಲ್ಲಿರುವ ಬಂಟರು, ತುಳು ಮಾತನಾಡುತ್ತಾರೆ. ಕೇರಳದ ಗಡಿಭಾಗಗಳಿಂದ ಕೊಡಗು ಹಾಗೂ ಮಂಗಳೂರು ಜಿಲ್ಲೆಗೆ ಬಂದ ಕುಶಲಿಗ, ಕೆಲಸಗಾರರ ಭಾಷೆ ಮಲೆಯಾಳಂ. ಹೀಗಾಗಿ ಈ ಜಿಲ್ಲೆಗಳಲ್ಲಿ ಕನ್ನಡದೊಡನೆ ಕೊಂಕಣಿ, ತುಳು, ಮಲೆಯಾಳಂ, ಕೊಡಗು ಭಾಷೆಗಳು ಬಳಕೆಗೊಳ್ಳುತ್ತಿರುವುದರಿಂದ ಈ ಪ್ರದೇಶವೆಲ್ಲ ಬಹುಭಾಷಾ ಪ್ರದೇಶವೆನಿಸುತ್ತದೆ. ಇದಲ್ಲದೆ ಒಂದೊಂದು ಜನಾಂಗದವರ ಕನ್ನಡವೂ ಒಂದೊಂದು ಪ್ರಭೇದ ಇಲ್ಲವೆ ಉಪಭಾಷೆ ಆಗುವುದು (ಹವ್ಯಕ, ಗೌಡ, ಬಂಟ, ಸೋಲಿಗ, ಮಾಪಿಳ್ಳೆ, ಕೊಂಕಣಿ, ಇತ್ಯಾದಿ) ಆದುದರಿಂದ ಈ ಪ್ರದೇಶದ ಪ್ರಭೇದಗಳನ್ನು ಹೆಚ್ಚು ವ್ಯವಸ್ಥಿತವಾಗಿ ಅಭ್ಯಸಿಸುವ ಆವಶ್ಯಕತೆ ಇದೆ.

**ತಮಿಳು ಪ್ರಭಾವಿತ ಪ್ರಭೇದ**

ಮೈಸೂರು ಜಿಲ್ಲೆಯ ಕೊಳ್ಳೆಗಾಲ, ಚಾಮರಾಜನಗರ, ಗುಂಡ್ಲುಪೇಟೆ ತಾಲೂಕುಗಳ ಗಡಿ ಪ್ರದೇಶವೆಲ್ಲ ತಮಿಳುನಾಡಿಗೆ ಹತ್ತಿಕೊಂಡಿರುವುದರಿಂದ ಈ ಭಾಗದಲ್ಲಿ ತಮಿಳಿನ ಪ್ರಭಾವ ಕಂಡುಬರುತ್ತದೆ. ನೀಲಗಿರಿ ಬೆಟ್ಟ, ಉದಕಮಂಡಲ, ವೀರರಾಜಪೇಟೆ(ಕೊಡಗು) ಪ್ರದೇಶದಲ್ಲೂ ತಮಿಳು ಪ್ರಭಾವವಿದೆ. ಈ ಪ್ರಭೇದದ ಪ್ರದೇಶವೆಲ್ಲ ಕೆಲಕಾಲ ತಮಿಳು ಅಧಿಕಾರಿಗಳ ಆಡಳಿತದಲ್ಲಿದ್ದುದರಿಂದಲೂ ಸಾಕಷ್ಟು ಕೆಲಸಗಾರರು ತಮಿಳುನಾಡಿನಿಂದ ಇಲ್ಲಿಗೆ ಬಂದು ನೆಲೆಸಿರುವುದರಿಂದಲೂ ತಮಿಳಿನ ಪ್ರಭಾವ ಸಹಜವಾಗಿದೆ. ನೀಲಗಿರಿ ಬೆಟ್ಟಗಳಲ್ಲಿ ವಾಸಿಸುವ ಕನ್ನಡಿಗರ ಭಾಷೆ ತಮಿಳಿನ ವಿಪರೀತ ಪ್ರಭಾವದಿಂದ ಕೂಡಿದೆ. ಇಲ್ಲಿಯ ಬಡಗರು ಮಾತನಾಡುವ ಕನ್ನಡ ಒಂದು ಉಪಭಾಷೆಯೇ ಆಗಿದೆ.

ಮೈಸೂರು ಜಿಲ್ಲೆಯ ಗಡಿ ತಾಲೂಕುಗಳಲ್ಲಿ ನಾಮಪದಗಳ ಅಂತ್ಯದಲ್ಲಿ ಬರುವ 'ಎ' ಕಾರವು 'ಅಯ್' ಎಂದು ಉಚ್ಚರಿಸಲ್ಪಡುವುದು ವಿಶೇಷ.

ಉದಾ : ಎಲಿ > ಎಲ್ಲೈ, ಕಲಿ >ಕಲ್ಲೈ, ಮನೆ > ಮನೈ.

ಇ>ಎ, ಉ>ಒ ಪರಿವರ್ತನೆಯಲ್ಲಿ ತಮಿಳನ್ನು ಅನುಸರಿಸುವುದು ಈ ಪ್ರಭೇದದ ಒಂದು ಗಮನಾರ್ಹ ಅಂಶ

ಪಿರಿ > ಪೆರಿ, ಇದಿರು >ಎದಿರು, ತುರು> ತೋರು, ಕುದಿ >ಕೊದಿ, ತಮಿಳು, ತುಳು ಭಾಷೆಗಳಲ್ಲಿಯ ಸ್ವರ ವ್ಯವಸ್ಥೆಯನ್ನು ಕರಾವಳಿ, ಕೊಡಗು, ಮೈಸೂರು ಗಡಿಭಾಗಗಳಲ್ಲಿಯ ಪ್ರಭೇದಗಳಲ್ಲಿ ಕಾಣಬಹುದು. ಈ ಪ್ರಭೇದಗಳ ಮೇಲಿನ ತಮಿಳು ಪ್ರಭಾವದ ವಿವರವಾದ ಅಧ್ಯಯನ ಮಾಡುವ ಅವಶ್ಯಕತೆ ಇದೆ. ಕನ್ನಡ-ತಮಿಳು ಜನರ ಪರಸ್ಪರ ಸಂಪರ್ಕ, ವಿಶೇಷವಾಗಿ ಇತಿಹಾಸಕಾಲದಿಂದಲೂ ಕಡಿಮೆ. ಹೀಗಾಗಿ ತೆಲುಗಿನಂತೆ ತಮಿಳಿನ ಪ್ರಭಾವ ಕನ್ನಡದ ಮೇಲೆ ಆಗಿಲ್ಲ.

ತಮಿಳು, ತೆಲುಗು, ಮಲೆಯಾಳಂ, ತುಳು, ಕೊಡಗು ಭಾಷೆಗಳು ಕನ್ನಡದ ಸಹೋದರ ಭಾಷೆಗಳೇ ಆಗಿರುವುದರಿಂದ ಅವುಗಳ ಪರಸ್ಪರ ಪ್ರಭಾವ ಬಹು ಬೇಗ ಹೊಂದಿಕೊಳ್ಳುತ್ತದೆ. ಈ ವಿಷಯದಲ್ಲಿ ನಾವು ಎರಡು ಸಂಗತಿಗಳನ್ನು ಲಕ್ಷಿಸಬೇಕಾಗುತ್ತದೆ.

೧. ಎರಡೂ ಭಾಷೆಗಳ ರಚನೆಯ ಸಾಮೀಪ್ಯ
೨. ಅವುಗಳ ಸಂಪರ್ಕದ ಕಾಲದ ಗಡುವು.

ಇವುಗಳಲ್ಲದೆ ಸಾಮಾಜಿಕ, ಸಾಂಸ್ಕೃತಿಕ ಮುಂತಾದ ಅನೇಕ ಅಂಶಗಳೂ ಪ್ರಭೇದಗಳನ್ನುಂಟು ಮಾಡುವಲ್ಲಿ ವಹಿಸುವ ಪಾತ್ರವನ್ನು ಗಮನಿಸಬೇಕಾಗುತ್ತದೆ.

೫.೦ ಅನ್ಯಭಾಷಾ ಪ್ರಭಾವದಿಂದುಂಟಾದ ಪ್ರಭೇದಗಳಲ್ಲಿ ಒಂದೇ ಭಾಷೆಯ ಪ್ರಭಾವವಾದರೂ ಇರಬಹುದು ಅಥವಾ ಹಲವು ಭಾಷೆಗಳ ಪ್ರಭಾವವೂ ಏಕಕಾಲಕ್ಕೆ ಆಗಲೂಬಹುದು. ಆದರೆ ಎಲ್ಲ ಅನ್ಯಭಾಷೆಗಳ ಪ್ರಭಾವ ಒಂದೇ ಪ್ರಮಾಣದಲ್ಲಿರುವುದಿಲ್ಲ. ಇದಕ್ಕೆ ಭೌಗೋಲಿಕ, ಸಾಮಾಜಿಕ, ರಾಜಕೀಯ ಮುಂತಾದ ಬೇರೆ ಕಾರಣಗಳೂ ಇರುತ್ತವೆ.

ಕನ್ನಡ ಭಾಷೆಯ ಪ್ರಾದೇಶಿಕ ಪ್ರಭೇದಗಳ ಪ್ರಮುಖ ನಿರ್ಮಾಣ ಕಾರಣಗಳನ್ನು ಇಲ್ಲಿ ಸ್ಥೂಲವಾಗಿ ವಿವೇಚಿಸಲು ಪ್ರಯತ್ನಿಸಲಾಗಿದೆ. ಇಲ್ಲಿಯ ವಿಶದೀಕರಣ ಪರಿಪೂರ್ಣವಾಗಿದೆಯೆಂದು ನಾನು ಹೇಳಲಾರೆ. ಒಂದೊಂದೇ ಕಾರಣಗಳನ್ನು ಎದುರಿಟ್ಟುಕೊಂಡು ಹೆಚ್ಚು ವ್ಯವಸ್ಥಿತವಾದ, ವಿವರವಾದ ಸಮಗ್ರ ಕನ್ನಡ ಭಾಷೆಯ ಪ್ರಾದೇಶಿಕ ಪ್ರಭೇದಗಳ ಅಧ್ಯಯನ, ಸಂಶೋಧನ ನಡೆಯಬೇಕಾಗಿದೆ.

ಹೀಗೆ ಕನ್ನಡದ ಅನೇಕ ಪ್ರಭೇದ ಭಾಷೆಗಳನ್ನು ಗುರುತಿಸಬಹುದಾಗಿದೆ. ಇಷ್ಟೊಂದು ವೈವಿಧ್ಯ- ಪೂರ್ಣ ಭಾಷಾ ಪ್ರಭೇದಗಳು ಕನ್ನಡದ ಮೊದಲ ಉಪಲಬ್ಧ ಗ್ರಂಥ ಕವಿರಾಜಮಾರ್ಗದ ಕಾಲದಿಂದಲೇ ಅಂದರೆ ಕ್ರಿ.ಶ. ೯ನೇ ಶತಮಾನದಿಂದಲೇ ಬಳಕೆಯಲ್ಲಿ ಇದ್ದವು. ಅಂತೆಯೆ ಕವಿರಾಜಮಾರ್ಗದ ಕರ್ತೃ ಶ್ರೀವಿಜಯನು ವಾಸುಗಿಯುಮರಿಯಲಾರದೆ ಬೇಸರುಗುಂದೇಸಿ ಬೇರೆ ಬೇರೆ ಅಪ್ಪುದರಿಂ ಎಂದು ಉದ್ಗರಿಸಿದ್ದಾನೆ. ಇಂದಿನ ಒಂದೊಂದು ಜಿಲ್ಲೆಯಲ್ಲೂ ಕನಿಷ್ಟ ಮೂರರಿಂದ ಎಂಟು ಪ್ರಾದೇಶಿಕ, ಮೂರರಿಂದ ಐದು ಸಾಮಾಜಿಕ ಕನ್ನಡ ಭಾಷಾ ಪ್ರಭೇದಗಳು ಕಂಡುಬರುತ್ತವೆ.

## ಕನ್ನಡ ಭಾಷಾಪ್ರಭೇದಗಳ ಮೇಲೆ ಅನ್ಯಭಾಷಾ ಪ್ರಭಾವ

| ಪ್ರದೇಶ (ಜಿಲ್ಲಾವಾರು) | ಉರ್ದು | ಮರಾಠಿ | ತೆಲುಗು | ತಮಿಳು | ಮಲೆಯಾಳಂ | ತುಳು | ಕೊಂಕಣಿ |
|---|---|---|---|---|---|---|---|
| ಬೀದರ | +++ | ++ | + | | | | |
| ಕಲಬುರ್ಗಿ | +++ | ++ | + | | | | |
| ವಿಜಾಪುರ | ++ | ++ | | | | | + |
| ಬೆಳಗಾವಿ | | +++ | + | | | | |
| ರಾಯಚೂರು | ++ | + | + | | | | |
| ಬಳ್ಳಾರಿ | + | | ++ | | | | |
| ಚಿತ್ರದುರ್ಗ | | | ++ | | | | |
| ತುಮಕೂರು | | | ++ | | | | |
| ಕೋಲಾರ | | | +++ | ++ | | | |
| ಬೆಂಗಳೂರು | | | ++ | + | | | |
| ಮೈಸೂರು | ++ | | + | + | + | | |
| ಕೊಡಗು | + | | | + | ++ | + | |
| ದ. ಕನ್ನಡ | | | | | +++ | ++ | + |
| ಉ. ಕನ್ನಡ | | ++ | | | + | +++ | ++ |
| ಶಿವಮೊಗ್ಗ | | | | | | ++ | + |
| ಮಂಡ್ಯ | + | | + | | | | |
| ಹಾಸನ | | | | | + | + | |
| ಚಿಕ್ಕಮಗಳೂರು | | | | | | + | |
| ಧಾರವಾಡ | | + | | | | | |

+++ ಹೆಚ್ಚು ++ ಸಾಧಾರಣ + ಕಡಿಮೆ

## ಗ್ರಂಥ : ಲೇಖನ ಋಣ


Weinreich Uriel : Languages in Contact findings & Problems

Longacker : Language & its Structure

ಕುಳ್ಳಿ ಜಿ. ಎಸ್. : ಐತಿಹಾಸಿಕ ಭಾಷಾವಿಜ್ಞಾನ

ಶಂಕರಭಟ್ ಡಿ.ಎನ್. : ಕನ್ನಡ ಭಾಷೆಯ ಸಂಕ್ಷಿಪ್ತ ಚರಿತ್ರೆ

ಧಾರವಾಡಕರ ಆರ್.ವಾಯ್. : ಕನ್ನಡ ಭಾಷಾಶಾಸ್ತ್ರ

Upadhyaya U.P. : Effects of Bilingualism an Bidar Kannada Kannada Linguistics Vol. 32. No. `.

Fischer J.C. : Social Influence in the Choice of a Linguistic varient work Vol. 14

ಚಿದಾನಂದಮೂರ್ತಿ ಎಂ. : ಹಳೆಯ ಮೈಸೂರಿನ ಕನ್ನಡ - ಸುವರ್ಣ ಸಂಚಯ

ಮರಿಯಪ್ಪ ಭಟ್ ಎಂ. : ದಕ್ಷಿಣ ಕನ್ನಡದ ಕನ್ನಡ - ಸುವರ್ಣ ಸಂಚಯ

ಮಿರ್ಜಿ ಅಣ್ಣಾರಾಯ : ಮಹಾರಾಷ್ಟ್ರ ಗಡಿನಾಡಿನ ಕನ್ನಡ - ಸುವರ್ಣ ಸಂಚಯ

ಭೀಮಸೇನ ರಾವ ಡಿ.ಕೆ. : ಗುಲಬರ್ಗ ರಾಯಚೂರುಗಳ ಕನ್ನಡ-ಸುವರ್ಣ ಸಂಚಯ

ಸವದತ್ತಿಮಠ ಎಸ್.ಡಿ. : ಹೈದ್ರಾಬಾದ ಕರ್ನಾಟಕದ ಕನ್ನಡ ಭಾಷೆಯಲ್ಲಿ ಉರ್ದು ಬಳಕೆ-ಗವಿದೀಪ್ತಿ (ಸ್ಮರಣ ಸಂಚಿಕೆ)

ಗುಂಡಪ್ಪ ವೀ. ರ. : ಕನ್ನಡಕ್ಕೆ ತಮಿಳಿನ ಎರವಲು ಮತ್ತು ಪ್ರಭಾವ - ಪ್ರಬುದ್ಧ ಕರ್ನಾಟಕ ಸಂ. ೪೦ ೪

ಬ್ರೈಟ್ ವಿಲ್ಯಂ : ಮೈಸೂರು ಕನ್ನಡದ ಸಾಮಾಜಿಕ ಭಾಷಾಪ್ರಭೇದಗಳು ಅನು - ಬಿ.ವಿ. ವೀರಭದ್ರಪ್ಪ-ಪ್ರಬುದ್ಧ ಕರ್ನಾಟಕ ಸಂ. ೪೫ ೩

ನಾಯಕ ಎಸ್.ಬಿ. : ಕರಾವಳಿ ಕನ್ನಡ ಬಳಕೆಯ ಶಬ್ದಗಳು - ಕರ್ನಾಟಕ ಭಾರತಿ ಸಂ. ೧೧

ಸವದತ್ತಿಮಠ ಸಂಗಮೇಶ : ಕನ್ನಡ ಭಾಷಾ ಕೈಪಿಡಿ (ಮೂರನೇ ಅವೃತ್ತಿ ೧೯೯೬)

ಕನ್ನಡ ವಿಶ್ವವಿದ್ಯಾಲಯದ ಪ್ರಥಮ ಗುರಿ 'ಕನ್ನಡ ಸಂಸ್ಕೃತಿ'ಯ ಶೋಧ, ವಿಮರ್ಶೆ ಮತ್ತು ಪ್ರಸಾರ. ಅಂತಿಮ ಗುರಿ ಸುತ್ತಲಿನ ಸಂಸ್ಕೃತಿಗಳ ವಿವೇಕಪೂರ್ಣ ವಿನಿಯೋಗ.

ಕನ್ನಡ ಸಮಾಜ ಉದ್ದಕ್ಕೂ ದ್ವಿಭಾಷಾ ಸಂದರ್ಭದಲ್ಲಿ ಬದುಕು ಮಾಡಿದೆ. ಹಿಂದಿನದು ಕನ್ನಡ–ಸಂಸ್ಕೃತ ದ್ವಿಭಾಷಾ ಸಂದರ್ಭ, ಇಂದಿನದು ಕನ್ನಡ–ಇಂಗ್ಲಿಷ್ ದ್ವಿಭಾಷಾ ಸಂದರ್ಭ. ಗ್ರಂಥಸ್ಥ ಭಾಷೆಯಾದ ಸಂಸ್ಕೃತಕ್ಕಿಂತ ಜೀವಂತ ಭಾಷೆಯಾದ ಇಂಗ್ಲಿಷ್ ಬೆಳಕಾಗುತ್ತಲೇ ಬೆಂಕಿಯಾಗಬಹುದೇ ? ಎಂಬ ಭಯ ನಮ್ಮಲ್ಲಿ ಹುಟ್ಟಿದೆ. ಹೆಚ್ಚಿನದಾಗಿ ಆಂಗ್ಲ ಜೀವನಶೈಲಿ ನಮ್ಮ ಜೀವನಾಡಿಗಳನ್ನು ದಿನೇದಿನೇ ನಿಯಂತ್ರಿಸತೊಡಗಿ, ಒಂದು ಬಗೆಯ ಅತಿರೇಕ ಸೃಷ್ಟಿಯಾಗುತ್ತಲಿದೆ.

ಗಾಂಧೀಜಿಯವರು ಈ ಅತಿರೇಕವನ್ನು ಬಹಳ ಹಿಂದೆಯೇ ಊಹಿಸಿ, 'ಸ್ವದೇಶೀ ಚಳುವಳಿ' ಯನ್ನು ಕೈಗೆತ್ತಿಕ್ಕೊಂಡಿದ್ದರು. ಈ ಮತ್ತು ಇಂಥ ದೇಶೀ ಚಿಂತನೆಗಳ ಆದರ್ಶದಲ್ಲಿ 'ಕನ್ನಡವು ಕನ್ನಡವ ಕನ್ನಡಿಸುತಿರಬೇಕು' ಎಂಬಂತೆ ನಾವು ಕನ್ನಡವನ್ನು ಬದುಕಿಸಬೇಕಾಗಿದೆ, ಬೆಳೆಸಬೇಕಾಗಿದೆ. ಹಾಗೆ ಮಾಡಿದಾಗ ಮಾತ್ರ ಕನ್ನಡತ್ವವನ್ನು ನಾಶ ಮಾಡಿಕೊಂಡು ಜಾಗತಿಕವಾಗುವುದು ತಪ್ಪಿ, ಕನ್ನಡವೂ ಜಾಗತಿಕವಾಗುತ್ತದೆ. ಜಾಗತಿಕವಾಗುವುದೆಂದರೆ ಸ್ಥಾನಿಕದ ನಿರಾಕರಣೆಯಲ್ಲವೆಂಬ ಸತ್ಯ ಸ್ಥಾಪನೆಗೊಳ್ಳುತ್ತದೆ.

ಹೆಗಲ ಮೇಲೆ ಈ ಹೊಣೆಯನ್ನು ಹೊತ್ತು ಅಸ್ತಿತ್ವಕ್ಕೆ ಬಂದಿರುವ ಕನ್ನಡ ವಿಶ್ವವಿದ್ಯಾಲಯ, ಅದನ್ನು ತನ್ನ ಪ್ರಸಾರಾಂಗದ ಮೂಲಕ ಪ್ರಧಾನವಾಗಿ ಪೂರೈಸುತ್ತಲಿದೆ. ಈ ನಿಟ್ಟಿನಲ್ಲಿ ಪ್ರಕಟವಾದ ಮಂಟಪ ಮಾಲೆಯ ಪುಸ್ತಕ 'ಕನ್ನಡ ಭಾಷಾ ಪ್ರಭೇದಗಳು'.

ಡಾ. ಸಂಗಮೇಶ ಸವದತ್ತಿಮಠ ಅವರು 'ಕನ್ನಡ ಭಾಷಾಪ್ರಭೇದ' ಗಳ ಬಗ್ಗೆ ತಲಸ್ಪರ್ಶಿ ಅಧ್ಯಯನವನ್ನು ಮಾಡಿದವರು. ಅವರ ಚಿಂತನೆಗಳು ಈ ಕಿರು ಪುಸ್ತಕದಲ್ಲಿ ಹರಳುಗೊಂಡಿವೆ. ಇದಕ್ಕಾಗಿ ಕನ್ನಡ ವಿಶ್ವವಿದ್ಯಾಲಯ ಅವರಿಗೆ ಋಣಿಯಾಗಿದೆ.

ಡಾ. ಎಂ. ಎಂ. ಕಲಬುರ್ಗಿ
ಕುಲಪತಿಗಳು

ಮಂಟಪ ಮಾಲೆ – ೪೨